# ಹರಿಶ್ಚಂದ್ರ ಕಾವ್ಯ-ಒಂದು ಸಾಂಸ್ಕೃತಿಕ ಅಧ್ಯಯನ

(DISSERTATION)


ಸಂಶೋಧಕರು

ಮೀನಾಕ್ಷಿ ಜಂಗಮುನಿ

ಮಾರ್ಗದರ್ಶಕರು

ಡಾ. ಪಿ. ಕೆ. ಖಂಡೋಬಾ

ಪ್ರಾಧ್ಯಾಪಕರು

ಕನ್ನಡ ಅಧ್ಯಯನ ಸಂಸ್ಥೆ

ಸ್ನಾತಕೋತ್ತರ ಕೇಂದ್ರ

ಕೃಷ್ಣದೇವರಾಯನಗರ - ಸೊಂಡೂರು - ೫೮೩ ೧೧೯ ( ಜಿ. ಬಳ್ಳಾರಿ )





ಎಂ. ಫಿಲ್. ಪದವಿಗಾಗಿ

ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಕಿರುಪ್ರಬಂಧ

೧೯೯೨



# ಹರಿಶ್ಚಂದ್ರ ಕಾವ್ಯ-ಒಂದು ಸಾಂಸ್ಕೃತಿಕ ಅಧ್ಯಯನ

(DISSERTATION)



ಸಂಶೋಧಕರು
ಮೀನಾಕ್ಷಿ ಜಂಗಮನಿ

ಮಾರ್ಗದರ್ಶಕರು
ಡಾ. ಪಿ. ಕೆ. ಖಂಡೋಬಾ
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಸಂಸ್ಥೆ
ಸ್ನಾತಕೋತ್ತರ ಕೇಂದ್ರ
ಕೃಷ್ಣದೇವರಾಯನಗರ - ಸೊಂಡೂರು - ೫೮೩ ೧೧೯ (ಜಿ. ಬಳ್ಳಾರಿ)




ಎಂ. ಫಿಲ್. ಪದವಿಗಾಗಿ

ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಕಿರುಪ್ರಬಂಧ

೧೯೯೨



# ದೃಢೀಕರಣ ಪತ್ರ

ಶ್ರೀಮತಿ ಮೀನಾಕ್ಷಿ ಜಳಗಮನಿ ಅವರು '' ಹರಿಶ್ಚಂದ್ರ ಕಾವ್ಯ : ಒಂದು ಸಾಂಸ್ಕೃತಿಕ ಅಧ್ಯಯನ '' ಕುರಿತು ನನ್ನ ಮಾರ್ಗದರ್ಶನದಲ್ಲಿ ಎಂ. ಫಿಲ್. ಪದವಿಗಾಗಿ ಸಾದರಪಡಿಸಿದ ಸಂಶೋಧನಾ ಧ್ಯಯನದ ಫಲಶ್ರುತಿ ಇದಾಗಿದೆ. ಈ ಮೊದಲು ಇದು ಎಲ್ಲಿಯೂ ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟಗೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 15-6-1992

ಮಾರ್ಗದರ್ಶಕರು

(ಡಾ. ಪಿ. ಕೆ. ಖಂಡೋಬಾ)
ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಸಂಸ್ಥೆ
ಗುಲಬರ್ಗಾ ವಿಶ್ವವಿದ್ಯಾಲಯ
ಸ್ನಾತಕೋತ್ತರ ಕೇಂದ್ರ
ಸಂಡೂರು (ಬಳ್ಳಾರಿ)



# ಘೋಷಣಾ ಪತ್ರ

ನಾನು 1992ನೆಯ ಸಾಲಿನಲ್ಲಿ ಎಂ.ಫಿಲ್.ಪದವಿಗಾಗಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ''ಹರಿಶ್ಚಂದ್ರ ಕಾವ್ಯ: ಒಂದು ಸಾಂಸ್ಕೃತಿಕ ಅಧ್ಯಯನ'' ಎಂಬ ಈ ಸಂಶೋಧನಾ ಪ್ರಬಂಧವು ನನ್ನ ಸ್ವಂತ ಅಧ್ಯಯನವನ್ನಾಧರಿಸಿ ರಚನೆಗೊಂಡಿದೆ.

''ಹರಿಶ್ಚಂದ್ರ ಕಾವ್ಯ: ಒಂದು ಸಾಂಸ್ಕೃತಿಕ ಅಧ್ಯಯನ'' ಎಂಬ ಪ್ರಬಂಧವನ್ನು ನಾನು ಈ ಮೊದಲು ಯಾವುದೇ ಪದವಿಗಾಗಿ, ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿಲ್ಲವೆಂದೂ, ಇದು ಬಿಡಿಯಾಗಿ ಇಲ್ಲವೆ ಇಡಿಯಾಗಿ ಎಲ್ಲಿಯೂ ಪ್ರಕಟಗೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಮೀ.ಜಂಗಮನಿ.
(ಮೀನಾಕ್ಷಿ ಜಂಗಮನಿ)
ಎಂ.ಫಿಲ್.ಸಂಶೋಧನಾ ವಿದ್ಯಾರ್ಥಿನಿ

ಕನ್ನಡ ಅಧ್ಯಯನ ಸಂಸ್ಥೆ,
ಸ್ನಾತಕೋತ್ತರ ಕೇಂದ್ರ,
ಕೃಷ್ಣದೇವರಾಯನಗರ,
ಸೊಂಡೂರು.
ದಿನಾಂಕ: 15-6-1992.

# ಅರಿಕೆ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಮಹಾಕವಿ ರಾಘವಾಂಕನದು ಬಹು ದೊಡ್ಡ ಹೆಸರು. ಹರಿಹರ ರಗಳೆ ಕವಿ ಎನ್ನಿಸಿದರೆ, ರಾಘವಾಂಕ ಹೊಸದೊಂದು ಮಾರ್ಗವನ್ನು ಸೃಷ್ಟಿಸಿ ಷಟ್ಪದಿಯ ಸಂಸ್ಥಾಪನಾಚಾರ್ಯನೆನಿಸಿದ್ದಾನೆ. ಈತನು ರಚಿಸಿದ ನಾಲ್ಕು ಕಾವ್ಯಗಳಲ್ಲಿ ಹರಿಶ್ಚಂದ್ರ ಕಾವ್ಯ ಕನ್ನಡ ಸಾಹಿತ್ಯದಲ್ಲಿ ಅತ್ಯಂತ ಉತ್ಕೃಷ್ಟವಾದ ಕಾವ್ಯವಾಗಿದೆ. ಆ ಕಾವ್ಯದ ಅಧ್ಯಯನ ಹಲವಾರು ನಿಟ್ಟಿನಲ್ಲಿ ನಡೆಯಬೇಕಾಗಿದೆ. ಅದರಂತೆ ''ಹರಿಶ್ಚಂದ್ರ ಕಾವ್ಯ: ಒಂದು ಸಾಂಸ್ಕೃತಿಕ ಅಧ್ಯಯನ'' ವನ್ನು ಕೈಕೊಂಡಿದ್ದು, ಪ್ರಸ್ತುತ ಪ್ರಬಂಧ ರಾಘವಾಂಕನ ಕಾವ್ಯದ ಸಾಂಸ್ಕೃತಿಕ ಅಧ್ಯಯನ ಕುರಿತಾಗಿದೆ. ರಾಘವಾಂಕನನ್ನು ಹಾಗು ಆತನ ಕಾವ್ಯಗಳನ್ನು ಕುರಿತು ಹಲವಾರು ಲೇಖನಗಳು ಪುಸ್ತಕಗಳು ಪ್ರಕಟಗೊಂಡಿವೆ. ರಾಘವಾಂಕನನ್ನು ಋಷಿಕವಿ, ಮಹಾಕವಿ, ಕವಿ ಎಂದು ವಿದ್ವಾಂಸರು ಲೇಖನಗಳನ್ನು ಬರೆದಿದ್ದಾರೆ. ಆತನ ಹರಿಶ್ಚಂದ್ರ ಕಾವ್ಯವನ್ನು ಶೈಲಿ, ರಸ, ವಸ್ತುವಿನ ದೃಷ್ಟಿಯಿಂದ ಹಲವಾರು ಲೇಖನಗಳು ಹೊರಬಂದಿವೆ. ಆದರೆ ರಾಘವಾಂಕನ ಯಾವುದೇ ಕೃತಿಯನ್ನು ಸಾಂಸ್ಕೃತಿಕ ಅಧ್ಯಯನಕ್ಕೆ ಯಾರು ಆಯ್ದುಕೊಂಡಿಲ್ಲ. ಆ ದಿಸೆಯಲ್ಲಿ ಇದೇ ಮೊದಲ ಪ್ರಯತ್ನವೆಂದೆನ್ನಬಹುದು. ಅಧ್ಯಯನದ ವ್ಯಾಪ್ತಿ ಕಿರಿದಾಗಿರುವುದಾದರೂ ಪ್ರಬಂಧಕ್ಕೊಂದು ಮಿತಿಯಿರುವುದರಿಂದ ಕಾವ್ಯದ ಸಮಗ್ರ ಸಾಂಸ್ಕೃತಕ ಅಧ್ಯಯನಕ್ಕೆ ಇಲ್ಲಿ ಅವಕಾಶವಿಲ್ಲ. ಎಂ.ಫಿಲ್.ಅಧ್ಯಯನಕ್ಕೆ ಈ ವಿಷಯವನ್ನು ಸೂಚಿಸಿ ಮಾರ್ಗದರ್ಶನ ಮಾಡಿದ ಕನ್ನಡ ಅಧ್ಯಯನ ಸಂಸ್ಥೆಯ ಸ್ಥಳೀಯ ಮುಖ್ಯಸ್ಥರಾದ ಪ್ರೊ: ಪಿ.ಕೆ.ಖಂಡೋಬಾ ಅವರಿಗೆ ನನ್ನ ಅನಂತ ಕೃತಜ್ಞತೆಗಳು.

ಪ್ರಬಂಧರಚನೆಯ ಸಂದರ್ಭದಲ್ಲಿ ಹಲವಾರು ಹೊಸ ವಿಚಾರಗಳನ್ನು ನೀಡಿದ ಕನ್ನಡ ಅಧ್ಯಯನ ಸಂಸ್ಥೆಯ ಅಧ್ಯಾಪಕರಾದ ಡಾ.ಮೃತ್ಯುಂಜಯ ಹೊರಕೇರಿ ಅವರಿಗೆ ಹಾಗು ಡಾ.ಶಾಂತಿನಾಥ ದಿಬ್ಬದ ಅವರಿಗೂ ನನ್ನ ನಮನಗಳು.

ಅಧ್ಯಯನದ ಕಾಲಕ್ಕೆ ಸಲಹೆ-ಸಹಕಾರ ನೀಡಿದ ಕು.ಕೆ.ಶಾರದಾ ಅವರಿಗೆ ನನ್ನ ನೆನಕೆಗಳು. ಈ ಪ್ರಬಂಧವನ್ನು ಅಚ್ಚುಕಟ್ಟಾಗಿ ಬೆರಳಚ್ಚು ಮಾಡಿದ ಶ್ರೀ. ಕೊಟ್ರಸ್ವಾಮಿ.ಎ.ಎಂ.ಎಂ. ಅವರಿಗೆ ಕೃತಜ್ಞಳಾಗಿರುವೆನು.

(ಮೀನಾಕ್ಷಿ ಜಂಗಮನಿ)
ಎಂ.ಫಿಲ್.ಸಂಶೋಧನಾ ವಿದ್ಯಾರ್ಥಿನಿ

ಕನ್ನಡ ಅಧ್ಯಯನ ಸಂಸ್ಥೆ,
ಸ್ನಾತಕೋತ್ತರ ಕೇಂದ್ರ,
ಕೃಷ್ಣದೇವರಾಯನಗರ,
ಸೊಂಡೂರು.
ದಿನಾಂಕ: 15-6-1992.

# ಪರಿವಿಡಿ



..... )

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಸಮಸ್ಯೆಗಳು ಅವರ ಜೀವನ ಮೌಲ್ಯಗಳು —ಇತ್ಯಾದಿಗಳ ವಿವರಣೆಯೇ ಆ ದೇಶದ ಇತಿಹಾಸ. ಜನತೆಯ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು ಸಾಂಸ್ಕೃತಿಕ ಅಧ್ಯಯನವೆಂದು ಕರೆಯುತ್ತಾರೆ. (ಚಿದಾನಂದ ಮೂರ್ತಿ 1979—1)

ಸಂಸ್ಕೃತಿ ಎಂದರೇನು ಎಂಬುದನ್ನು ಕುರಿತು ವಿವಿಧ ವಿದ್ವಾಂಸರ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ನಿರೂಪಿಸಬಹುದು. ಕಿಂಗ್ ಲೀ ಡೇವಿಸನ ಪ್ರಕಾರ '' ಮನುಷ್ಯನನ್ನು ಪ್ರಾಣಿಗಳಿಂದ ಬೇರ್ಪಡಿಸಬಲ್ಲ ಅಂಶವೇ ಸಂಸ್ಕೃತಿ'' ಮನುಷ್ಯನಿಗೆ ಸಂಸ್ಕೃತಿ ಉಂಟು; ಪ್ರಾಣಿಗಳಿಗೆ ಸಂಸ್ಕೃತಿ ಇಲ್ಲ. (ಚಿದಾನಂದ ಮೂರ್ತಿ 1979—4)

ಮ್ಯಾಥ್ಯೂ ಆರ್ನಾಲ್ಡನ ಪ್ರಕಾರ '' ನಮ್ಮನ್ನು ನಾವು ಉತ್ತಮಗೊಳಿಸಿಕೊಳ್ಳಲು ಮಾಡುವ ಪ್ರಯತ್ನವೇ ಸಂಸ್ಕೃತಿ. (ಚಿದಾನಂದಮೂರ್ತಿ. 1979—4) ಈತನ ಪ್ರಕಾರ ಮನುಷ್ಯನಲ್ಲಿನ ಮೃಗತ್ವವನ್ನು ಹೋಗಲಾಡಿಸಿ ಅಲ್ಲಿ ನಿಜವಾದ ಮಾನವೀಯತೆಯನ್ನು ಸಾಧಿಸುವುದೇ ಸಂಸ್ಕೃತಿ.

ರವೀಂದ್ರನಾಥ ಠಾಗೂರ '' ಮನುಷ್ಯನ ಸಾಂಘಿಕ ಜೀವನದಲ್ಲಿ ಅಭಿವ್ಯಕ್ತಿಗೊಂಡ ಧರ್ಮವೇ ಸಂಸ್ಕೃತಿ. ಜೀವನಾದರ್ಶಗಳನ್ನು ಮೌಲ್ಯಗಳನ್ನು ನಮ್ಮ ಮುಂದಿಡುವುದು ಸಂಸ್ಕೃತಿಯ ಉದ್ದೇಶಗಳಲ್ಲೊಂದು. ಎಲ್ಲಿ ಸರಳವಾದ ರೂಪದಲ್ಲಿ ಆಧ್ಯಾತ್ಮವು ಅಭಿವ್ಯಕ್ತವಾಗಿರುವುದೋ ಅಲ್ಲಿ

ಸಂಸ್ಕೃತಿಯೂ ಅತ್ಯುನ್ನತ ರೂಪದಲ್ಲಿ ಸೃಷ್ಟಿಯಾಗುತ್ತೆಂದು ಭಾವಿಸಬೇಕು.(ಜಯಾನಂದ ಮಯೂರ 1985-4).

ಟಿ.ಎಸ್.ಎಲಿಯಟ್ ಸಂಸ್ಕೃತಿ ಎಂಬುದು ಒಬ್ಬ ವ್ಯಕ್ತಿಯಲ್ಲಿ ಕಂಡು ಬರುವುದಕ್ಕಿಂತ ಹೆಚ್ಚಾಗಿ ಒಂದು ಸಮಾಜದ ಅಥವಾ ಗುಂಪಿನ ''ಜೀವನ ವಿಧಾನ'' ದಲ್ಲಿ ಕಂಡು ಬರುತ್ತದೆ. ಅತನ ಮಾತುಗಳಲ್ಲಿಯೇ ಹೇಳುವುದಾದರೆ ''ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗದ ಜೀವನ ವಿಧಾನವೇ ಸಂಸ್ಕೃತಿ. ಈ ಸಂಸ್ಕೃತಿಯು ಅವರ ಕಲೆಗಳಲ್ಲಿ, ಸಾಮಾಜಿಕ ವ್ಯವಸ್ಥೆಯಲ್ಲಿ, ಅವರ ಆಚಾರ-ವ್ಯವಹಾರಗಳಲ್ಲಿ, ಧರ್ಮದಲ್ಲಿ ವ್ಯಕ್ತವಾಗುತ್ತದೆ. ಆದರೆ ಇವೆಲ್ಲವನ್ನೂ ಒಟ್ಟಿಗೆ ಸೇರಿಸಿದರೂ ಅದು ಸಂಸ್ಕೃತಿಯಾಗಲಾರದು. ಮನುಷ್ಯನ ದೇಹವನ್ನು ಹೇಗೋ ಹಾಗೆ ಸಂಸ್ಕೃತಿಯನ್ನು ವಿಭಾಗಗಳಾಗಿ ವಿಂಗಡಿಸಬಹುದು. ದೇಹದ ಅಂಗಗಳ ಮೊತ್ತವೇ ಹೇಗೆ ಮನುಷ್ಯನಲ್ಲವೋ ಹಾಗೆಯೇ ಆ ಜನಾಂಗಗಳ ಕಲೆಗಳ, ಸಂಪ್ರದಾಯಗಳ, ಧಾರ್ಮಿಕ ಶ್ರದ್ಧೆಗಳ ಮೊತ್ತವೇ ಸಂಸ್ಕೃತಿ ಆಗಲಾರದು. ಇವು ಒಂದು ಮತ್ತೊಂದರ ಮೇಲೆ ಪ್ರಭಾವವನ್ನು ಬೀರುತ್ತವೆ. ಶ್ರೇಷ್ಠ ಸಂಸ್ಕೃತಿಯುಳ್ಳಂತೆ ಶ್ರೇಷ್ಠವಲ್ಲದ ಸಂಸ್ಕೃತಿಗಳೂ ಉಂಟು.

ಹೆನ್ರಿ ಪ್ರಾಟ್ ಫೇರ್‌ಚೈಲ್ಡ್ ''ಸಂಸ್ಕೃತಿಯು ಹುಟ್ಟಿನಿಂದ ಬರದೆ ಮನುಷ್ಯ ತನ್ನ ಪರಿಸರದಿಂದ ಕಲಿತುಕೊಳ್ಳುವ ಭಾಷೆ, ಉಪಕರಣಗಳ ತಯಾರಿಕೆ, ಕೈಗಾರಿಕೆ, ಕಲೆ, ವಿಜ್ಞಾನ, ಕಾನೂನು, ಆಡಳಿತ, ನೀತಿ ಮತ್ತು ಧರ್ಮ -ಇತ್ಯಾದಿಗಳೆಲ್ಲವನ್ನೂ ಒಳಗೊಳ್ಳುತ್ತದೆ. ಸಮಾಜ ಶಾಸ್ತ್ರಜ್ಞನಾದ ಈತನು ಸಂಸ್ಕೃತಿಯ ವ್ಯಾಖ್ಯೆಯನ್ನು ಸಮಾಜಶಾಸ್ತ್ರದ ತಳಹದಿಯ ಮೇಲೆ ನಿರೂಪಿಸಿದ್ದಾನೆ.

ರೂತ್ ಬೆನೆಡಿಕ್ಟ್, ''ಸಂಸ್ಕೃತಿ ಎಂದರೆ ಒಂದು ಸಮಾಜದ ಜೀವನವಿಧಾನ, ಆಚಾರ ವ್ಯವಹಾರಗಳು, ಅವರ ಸಂಸ್ಥೆಗಳು, ಆಲೋಚನಾ ವಿಧಾನಗಳು, ಪ್ರತಿಯೊಬ್ಬ ವ್ಯಕ್ತಿಯೂ ಪ್ರಪಂಚವನ್ನು ಸ್ವತಂತ್ರವಾಗಿ ನೋಡಲಾರ. ಅವನ ಸಮಾಜದ ಆಲೋಚನಾ ವಿಧಾನಗಳು, ಆಚಾರ-ವ್ಯವಹಾರಗಳು, ಸಂಪ್ರದಾಯಗಳೂ ಅವನ ದೃಷ್ಟಿಯನ್ನು ನಿಯಂತ್ರಿಸುತ್ತವೆ; ಮಾರ್ಪಡಿಸುತ್ತವೆ.'' ಹೀಗೆ ಮನುಷ್ಯ ಬಹುಮಟ್ಟಿಗೆ ತಾನು ಹುಟ್ಟಿ ಬೆಳೆದ ಸಂಸ್ಕೃತಿಯ ಶಿಶುವೆಂದು ಹೇಳಬಹುದು. (ಉದ್ಧೃತ)

ಮೇಲ್ಕಾಣಿಸಿದ ವಿದ್ವಾಂಸರ ಹೇಳಿಕೆಗಳಲ್ಲಿ ನಮ್ಮ ಪ್ರಬಂಧಕ್ಕೆ ಸೂಕ್ತವಾದ ಹೇಳಿಕೆ ರೂತ್ ಬೆನೆಡಿಕ್ಟ್ ನದಾಗಿದೆ. ಆದ್ದರಿಂದ ಈ ಹೇಳಿಕೆಯನ್ನು ನಾನು ಅಂಗೀಕರಿಸಿದ್ದೇನೆ. ರಾಘವಾಂಕನ ಕಾಲದಲ್ಲಿದ್ದ ಜನರ ಬದುಕಿನ ರೀತಿ, ಅವರ ಧರ್ಮಗಳು, ಆರ್ಥಿಕ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆ, ಅವರ ಬಾಳನ್ನು ಹಿಡಿದು ನಡೆಸಿದ ಮೌಲ್ಯಗಳು. ಒಟ್ಟಿನಲ್ಲಿ ಅವರ ಜೀವನ ವಿಧಾನ ಇವುಗಳನ್ನು ನಿರೂಪಿಸುವುದೇ ಈ ಪ್ರಬಂಧದ ಉದ್ದೇಶ. ಹರಿಶ್ಚಂದ್ರ ಕಾವ್ಯವನ್ನಾಧರಿಸಿ ಇವುಗಳ ನಿರೂಪಣೆಯು

ಮೂಲಕ ರಾಘವಾಂಕನ ಕಾಲದ ಸಂಸ್ಕೃತಿಯನ್ನು ಎತ್ತಿ ತೋರಿಸಬಹುದು.

ಇದುವರೆಗೆ ರಾಘವಾಂಕ ಹಾಗು ಆತನ ಕೃತಿಗಳನ್ನು ಕುರಿತು ಹಲವಾರು ಲೇಖನಗಳು, ಹೊತ್ತಿಗೆಗಳು ಪ್ರಕಟವಾಗಿವೆ. ಅಲ್ಲಿ ರಾಘವಾಂಕನನ್ನು ಹಾಗು ಹರಿಶ್ಚಂದ್ರ ಕಾವ್ಯವನ್ನು ವಿಭಿನ್ನ ದೃಷ್ಟಿಕೋನಗಳಿಂದ ನೋಡಲಾಗಿದೆ. ಕೆ.ವೆಂಕಟರಾಮಪ್ಪನವರ 'ಕವಿ ರಾಘವಾಂಕ', ಎಸ್.ಹೆಚ್. ತಿಪ್ಪೇರುದ್ರಸ್ವಾಮಿಯವರ 'ಋಷಿಕವಿ ರಾಘವಾಂಕ' ಡಾ.ಆರ್.ಸಿ.ಹಿರೇಮಠರ '' ಮಹಾಕವಿ ರಾಘವಾಂಕ' ಇವುಗಳೆಲ್ಲವುಗಳಲ್ಲಿ ರಾಘವಾಂಕನ ವ್ಯಕ್ತಿತ್ವ ಹೇಗೆ ಆತನ ಕೃತಿಯಲ್ಲಿ ವ್ಯಕ್ತವಾಗಿದೆ ಎಂಬುದನ್ನು ವಿವರಿಸತಕ್ಕ ಕೃತಿಗಳು. ಇನ್ನು ಹರಿಶ್ಚಂದ್ರ ಕಾವ್ಯವನ್ನು ಕುರಿತು ಜಿ.ಎಸ್. ಶಿವರುದ್ರಪ್ಪನವರ ಪರಿಶೀಲನ, ಅನುರಣನ ಮೊದಲಾದ ಕೃತಿಗಳು ಹೆಚ್ಚು ಮೌಲಿಕವಾಗಿವೆ. ಇದಲ್ಲದೆ ಹರಿಶ್ಚಂದ್ರ ಕಾವ್ಯದಲ್ಲಿ ಪ್ರತಿಪಾದಿತವಾದ ಕರುಣರಸ ಹಾಗು ಅದರ ನಾಟಕೀಯ ಕ್ರಿಯೆಯನ್ನು ಕುರಿತು ಹಲವಾರು ಲೇಖನಗಳು ಬಂದಿವೆ. ಇದಲ್ಲದೆ ಇತ್ತೀಚೆಗೆ ಪ್ರಕಟವಾದ ಡಾ.ಎಲ್.ವಿ. ಸೂರ್ಯ ನಾರಾಯಣರ '' ರಾಘವಾಂಕ ಒಂದು ಅಧ್ಯಯನ' ವು ರಾಘವಾಂಕನ ಬಗ್ಗೆ ಹರಿಶ್ಚಂದ್ರ ಕಾವ್ಯದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಒದಗಿಸಿಕೊಡಬಲ್ಲ ಕೃತಿಯಾಗಿದೆ. ಡಾ.ಹರದಗಟ್ಟಿಯವರ ಅಪ್ರಕಟಿತ '' ರಾಘವಾಂಕ ಹಾಗು ಅವನ ಕೃತಿಗಳು'' (ಸಮಗ್ರ ಅಧ್ಯಯನವು) ರಾಘವಾಂಕನ ಕೃತಿಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಕೊಡುತ್ತದೆ.

ಈ ಹಿನ್ನೆಲೆಯಲ್ಲಿ ನೋಡಲಾಗಿ ರಾಘವಾಂಕನ ಯಾವುದೇ ಕೃತಿಗಳ ಸಾಂಸ್ಕೃತಿಕ ಅಧ್ಯಯನ ನಡೆದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ನಾನು ರಾಘವಾಂಕನ ಹರಿಶ್ಚಂದ್ರ ಕಾವ್ಯವನ್ನು ಸಾಂಸ್ಕೃತಿಕ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿದ್ದೇನೆ.

ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಅಂದಿನ ಕಾಲದ ಸಂಸ್ಕೃತಿ ಮೂಡಿ ಬಂದ ರೀತಿಯನ್ನು ಚಿತ್ರಿಸುವುದಕ್ಕಿಂತ ಪೂರ್ವದಲ್ಲಿ ಒಂದು ಮಾತನ್ನು ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಚಿತ್ರಿಸಿರತಕ್ಕ ಅಂದಿನ ಜನತೆಯ ಮೌಲ್ಯಗಳು, ರೀತಿ-ನೀತಿಗಳು, ರಾಘವಾಂಕನ ಕಾಲಕ್ಕೆ ಮಾತ್ರ ಸೀಮಿತವಾದವೆಂದಲ್ಲ ಅಥವಾ ಆತನ ಕಾಲದಿಂದಲೇ ಪ್ರಾರಂಭವಾದವುಗಳೂ ಎಂದಲ್ಲ. ಅವು ಸಾರ್ವಕಾಲಿಕವೂ ಆಗಿರಬಹುದು ಅಥವಾ ಆತನಿಗಿಂತ ಪೂರ್ವಕಾಲದಿಂದಲೂ ಬೆಳೆದು ಬಂದವುಗಳಾಗಿರಬಹುದು. ಆ ಮೌಲ್ಯಗಳನ್ನು, ಆಚಾರ-ವಿಚಾರಗಳನ್ನು, ನಂಬಿಕೆಗಳನ್ನು ಅಂದಿನ ಜನತೆ ಯಾವ ರೀತಿ ಅರ್ಥೈಸಿದರು ಮತ್ತು ಯಾವ ರೀತಿ ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದರು ಎಂಬುದನ್ನು ಪ್ರತಿಪಾದಿಸಿದ್ದೇನೆ.

ಆಕರಗಳು:

1. ಚಿದಾನಂದ ಮೂರ್ತಿ ಎಂ.:1979: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,
ಮೈಸೂರು.

2. ತಿಪ್ಪೇರುದ್ರಸ್ವಾಮಿ. ಹೆಚ್. :1985: ಕರ್ನಾಟಕ ಸಂಸ್ಕೃತಿ ಸಮೀಕ್ಷೆ.
ಡಿ.ವಿ.ಕೆ.ಮೂರ್ತಿ. ಮೈಸೂರು.

# ಸಾಮಾಜಿಕ ವ್ಯವಸ್ಥೆ

ಸಾಹಿತ್ಯ ಜನಜೀವನದ ಗತಿಬಿಂಬ. ಅದು ನಿರಂತರವಾಗಿ ಬದಲಾಗುತ್ತಿರುವ ಸಮಾಜದ ಜನಜೀವನವನ್ನು ಚಿತ್ರಿಸುತ್ತದೆ. ಸಮಾಜಜೀವಿಯಾದ ಕವಿ ತನ್ನ ಸಮಕಾಲೀನ ಬದುಕನ್ನು ಕಾವ್ಯದಲ್ಲಿ ಚಿತ್ರಿಸುತ್ತಾನೆ. ಅಂತೆಯೇ ವ್ಯಾಸಮಹರ್ಷಿಯ ಮಹಾಭಾರತವು ಪಂಪನ ಕೈಯಲ್ಲಿ ವಿಕ್ರಮಾರ್ಜುನ ವಿಜಯವಾಗಿ ಪಂಪನ ಕಾಲದ ಕ್ಷಾತ್ರತೇಜಸ್ಸನ್ನು ಹೊರಹೊಮ್ಮಿಸಿತು. ಇದೇ ಮಹಾಭಾರತ ಕುಮಾರವ್ಯಾಸನಲ್ಲಿ ''ತಿಳಿಯ ಹೇಳುವೆ ಕೃಷ್ಣಕತೆಯನ್ನು ಇಳೆಯ ಜಾಣರು ಮೆಚ್ಚುವ'' ಹಾಗೆ ಕೃಷ್ಣಕತೆಯಾಗಿ ಕುಮಾರವ್ಯಾಸನ ಭಕ್ತಿಪಾರಮ್ಯವನ್ನು ಮೆರೆಯುವ ಸಾಧನವಾಯಿತು. ಹೀಗೆ ಕವಿಯು ಕಾವ್ಯದಲ್ಲಿ ತನ್ನ ಸಮಕಾಲೀನ ಜನಜೀವನವನ್ನು, ಅವರ ಬದುಕಿನ ರೀತಿ-ನೀತಿ, ಅವರ ಆಚಾರ ವಿಚಾರ, ಅವರು ನಂಬಿದ ಮೌಲ್ಯಗಳನ್ನು ಅಭಿವ್ಯಕ್ತಿಗೊಳಿಸುವನು. ಪ್ರಸ್ತುತ ಅಧ್ಯಾಯದಲ್ಲಿ ರಾಘವಾಂಕನ ಕಾಲದ ಸಾಮಾಜಿಕ ವ್ಯವಸ್ಥೆಯು ಹೇಗಿತ್ತು ಎನ್ನುವುದನ್ನು ವಿವೇಚಿಸಲಾಗಿದೆ. ಈ ಸಾಮಾಜಿಕ ವ್ಯವಸ್ಥೆಯು ವರ್ಣವ್ಯವಸ್ಥೆ, ದಾನಧರ್ಮ, ಮೂಢನಂಬಿಕೆಗಳು, ಮಹಾಜನರ ಆದರ ಹಾಗೂ ಡಂಗುರ ಪದ್ಧತಿ, ತೀರ್ಥಕ್ಷೇತ್ರಗಳು, ವೇಶ್ಯಾವಾಟಿಕೆ, ಮೃಗಯಾವಿನೋದ ಹಾಗೂ ತೊತ್ತುಗಳ ಅಧ್ಯಯನವನ್ನು ಒಳಗೊಂಡಿದೆ.

## ವರ್ಣ ವ್ಯವಸ್ಥೆ:

ಭಾರತೀಯರ ಬದುಕಿನಲ್ಲಿ ಜಾತಿ ಪದ್ಧತಿ ಹಾಸುಹೊಕ್ಕಾಗಿದೆ. ''ಅಸ್ಪೃಶ್ಯತೆ ಎನ್ನುವುದು ಭಾರತಕ್ಕೆ ವಿಶಿಷ್ಟವಾದುದು. ಬೇರೆ ದೇಶಗಳಲ್ಲಿ ಕೆಲವು ಗುಂಪುಗಳನ್ನೇ ಅನುಕೂಲಕರ ಸ್ಥಿತಿಯಲ್ಲಿರುವ

ಜನರು ಹೀನಾಯವಾಗಿ ಕಂಡಿರುವುದುಂಟು. ಆದರೆ ವಿಶ್ವದ ಇತಿಹಾಸದಲ್ಲಿಯಾವುದೇ ಕಾಲದ ಯಾವುದೇ ದೇಶದ ಜನ ಒಂದು ದೊಡ್ಡ ಗುಂಪನ್ನು ಮುಟ್ಟಲೂ ಯೋಗ್ಯವಲ್ಲವೆಂದು ಊರಿನಿಂದ ಹೊರಗೆ ಇಟ್ಟ ಉದಾಹರಣೆ ಭಾರತವನ್ನು ಬಿಟ್ಟರೆ ಮತ್ತೊಂದು ಇಲ್ಲ. ಚಾತುರ್ವರ್ಣ್ಯ ವ್ಯವಸ್ಥೆಯು ಭಾರತೀಯ ಸಮಾಜವನ್ನು ನಾಲ್ಕು ಗುಂಪುಗಳಾಗಿ ಒಡೆದದ್ದು ಮಾತ್ರವಲ್ಲದೆ, ಅಸಮಾನತೆಯ ಅನುಶ್ರೇಣಿಗಳನ್ನಾಗಿ ಸಮಾಜವನ್ನು ಶಾಶ್ವತವಾಗಿ ಭಿನ್ನಗೊಳಿಸಿತು.'' (ಚಿದಾನಂದಮೂರ್ತಿ :1985: 16 ಮತ್ತು 17) ಈ ಜಾತಿ ಪದ್ಧತಿ ವೇದಗಳ ಕಾಲದಿಂದ ಇಂದಿನವರೆಗೆ ವಿವಿಧ ಹೆಸರಿನಿಂದ ಭಾರತದ ನಾನಾ ಭಾಗಗಳಲ್ಲಿ ಪ್ರಚಲಿತವಿದೆ. ಮನುಷ್ಯ ಮನುಷ್ಯರನ್ನು ಪ್ರತ್ಯೇಕಿಸಿ ನೋಡುವ ಈ ಪದ್ಧತಿ ಸಮಾಜದ ಏಳಿಗೆಗೆ ಕಂಟಕಪ್ರಾಯವಾಗಿದೆ.

ಈ ಅನಿಷ್ಟಕಾರಕವಾದ ಜಾತಿಪದ್ಧತಿಯನ್ನು ಹೋಗಲಾಡಿಸಲು ಪ್ರಾಮಾಣಿಕ ಪ್ರಯತ್ನ ಮಾಡಿದವರಲ್ಲಿ ವಚನಕಾರರು ಮೊದಲಿಗರು. ಯಾರು ಹೊಲೆಯ ಎನ್ನುವ ಪ್ರಶ್ನೆಗೆ, ''ಕೊಲ್ಲುವವನೆ ಮಾದಿಗ ಹೊಲಸು ತಿಂಬುವನೇ ಹೊಲೆಯ....... ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಕೂಡಲಸಂಗನ ಶರಣರೇ ಕುಲಜರು'' ಎಂದು ಉತ್ತರಿಸಿದರು. ಜಾತಿ ಎನ್ನುವುದು ಕೇವಲ ಹುಟ್ಟಿನಿಂದ ಬಂದುದಲ್ಲ; ಸತ್ಯನಿಷ್ಠೆಯಿಂದ, ಸಕಲ ಜೀವಿಗಳಿಗೆ ಲೇಸನೆ ಬಯಸುವ ನಡವಳಿಕೆಯಿಂದ ಬಂದುದು ಎಂದು ಸಾರಿದರು.

ಹೊಲೆಯ, ಹೊಲೆತನದ ಸಮಸ್ಯೆಯನ್ನು ರಾಘವಾಂಕ ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಎತ್ತಿಕೊಂಡಿದ್ದರೂ, ಅವನು ಸಮಸ್ಯೆಯನ್ನು ನೋಡಿರುವ ರೀತಿ, ವಚನಕಾರರ ರೀತಿಗಿಂತ ಭಿನ್ನವಾಗಿದೆ. ವಚನಕಾರರು ಈ ಸಮಸ್ಯೆಯನ್ನು ಸಾಮಾಜಿಕ ದೃಷ್ಟಿಯಿಂದ ನೋಡಿದರೆ ರಾಘವಾಂಕನು ತಾತ್ವಿಕವಾಗಿ ನೋಡಿದ್ದಾನೆ. ''ಹೊಲೆತನ ಎನ್ನುವ ಅನಿಷ್ಟ ಸಂಪ್ರದಾಯವನ್ನು ಆತನು ಖಂಡಿಸಿದ್ದಾನೆ. ಮನುಷ್ಯರಾದ ಆ ಜನ 'ಹೊಲೆಯರು' ಎನ್ನಿಸಿಕೊಂಡು ಮಾನವತೆಯಿಂದ ವಂಚಿತರಾಗಿ ಬಾಳಬೇಕಾದ ಶೋಚನೀಯ ಪರಿಸ್ಥಿತಿಯನ್ನು ಕವಿ ಮನಗಂಡಿದ್ದಾನೆ; ಈ ದುಷ್ಟ ವಾಸ್ತವತೆಯ ಮೊಸಳೆದವಡೆಗೆ ಸಿಕ್ಕು ನುಚ್ಚು ನೂರಾಗುತ್ತಿರುವವರನ್ನು ಕಂಡು ಮರುಗಿದ್ದಾನೆ.''(ಹಕಾರಿ:1975—:55) ಆದ್ದರಿಂದ 'ಯಾವುದೇ ಸಾಹಿತ್ಯಕ ಆಕರ' ಗಳಲ್ಲಿಲ್ಲದ ಹೊಲತಿಯರ ಸಂದರ್ಭವನ್ನು ರಾಘವಾಂಕನು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಸೃಷ್ಟಿಸಿದ್ದಾನೆ. ತನ್ನ ಕಾಲದ ಸಾಮಾಜಿಕ ವಾಸ್ತವತೆಯನ್ನು ವರ್ಣಾಶ್ರಮ ಧರ್ಮದ ಚೌಕಟ್ಟಿನಲ್ಲಿ ಪರಿಶೀಲಿಸುವ ಉದ್ದೇಶದಿಂದ ಈ ಸಂದರ್ಭವನ್ನು ಸೃಷ್ಟಿಸಿದ್ದಾನೆ. ಹೊಲೆತನದ ಪ್ರಶ್ನೆಯನ್ನು ಕಾವ್ಯದಲ್ಲಿ ತಾತ್ವಿಕವಾಗಿ ಬೆಳೆಯಿಸಿಕೊಂಡು ಬಂದಿರುವುದನ್ನು ನೋಡಿದರೆ ತನ್ನ ಕಾಲದ 'ಸಾಮಾಜಿಕ ಆಕರ' ವನ್ನು ಪ್ರಜ್ಞಾಪೂರ್ವಕವಾಗಿ ಉದ್ದೇಶಪೂರ್ವಕವಾಗಿಯೇ ಸೃಷ್ಟಿಸಿದ್ದಾನೆ ಎನಿಸುತ್ತದೆ.'' (ಶಿವಾನಂದ:1992:39).

ರಾಘವಾಂಕನು ಚಿತ್ರಿಸಿದ ಹೊಲೆಯರನ್ನು ಮೂರು ರೀತಿಯಾಗಿ ವಿಂಗಡಿಸಬಹುದು.

1) ಋಷಿಯೊಬ್ಬನ ಅಂತರಂಗದ ತಾಮಸ ಗುಣಗಳಿಂದ ಹುಟ್ಟಿದ ಗಾನಗಾರ್ತಿಯರು.
2) ಹುಟ್ಟಿನಿಂದಲೇ ಹೊಲೆಯನಾದ ವೀರಬಾಹುಕ.
3) ಸತ್ಕುಲ ಪ್ರಸೂತನಾದರೂ ಅನಿವಾರ್ಯವಾಗಿ ಹೊಲೆಯನಾಗಬೇಕಾಗಿ ಬಂದ ರಾಜ ಹರಿಶ್ಚಂದ್ರ.

1) ಋಷಿಯ ಅಂತರಂಗದ ತಾಮಸ ಗುಣಗಳಿಂದ ಹುಟ್ಟಿದ ಗಾನಗಾರ್ತಿಯರು:

ಹುಟ್ಟಿನಿಂದ ಯಾರೂ ಹೊಲೆಯರಲ್ಲ; ಅದು ಸಂಸ್ಕಾರಜನ್ಯಗುಣ ಎನ್ನುವುದು ರಾಘವಾಂಕನ ಅಭಿಮತ. "ಮುನಿಗೆ ಹೊಲೆ ಯಾವುದು ಅತಿಕೋಪ ಬದ್ಧ ದ್ವೇಷ, ಅನಿಮಿತ್ತ ವೈರ ಅದರಿಂದ ಹುಟ್ಟಿದವರಾಗಿ ವನಿತೆಯರು ಕಡೆಗೆ ಹೊಲತಿಯರು" (ಹ.ಕಾ.ಸ್ಥ 7-2) ಅವರ ಹಾಡುಗಳಲ್ಲಿ ಕರ್ಣಮಧುರ, ರೂಪ ಯೌವನಗಳು ನಯನ ಮನೋಹರ, ಮಾತು ಪ್ರಗತಿಪರ, ಬಾಹ್ಯ ನಿಲುವಿಗೆ ಏನೂ ಕೊರತೆ ಇಲ್ಲ. ಆದರೆ ಅಂತರಂಗ ಮಾತ್ರ ದುರುದ್ದೇಶಗಳಿಂದ ಕೂಡಿದ್ದು.

"ಕುಟಿಲ ಕುಂತಲದ ಚಂಚಲಾಕ್ಷಿಗಳ ಕ
ರ್ಕಶಕುಚದ ಶಿಥಿಲಮಧ್ಯದ........ (ಹ.ಕಾ.ಸ್ಥ. 7-3)

ಮೊದಲಾದ ಅವಗುಣಗಳ ಸಂಗದಿಂದ ಅವರು ನಿಜವಾಗಿಯೂ ಹೊಲತಿಯರೇ ಆಗಿದ್ದಾರೆ. ಹರಿಶ್ಚಂದ್ರನನ್ನು ತಮ್ಮ ಗಾಯನದಿಂದ ಸಂತೋಷಪಡಿಸಿದ ಸಂದರ್ಭದಲ್ಲಿ ಸಂಪ್ರೀತನಾದ ಹರಿಶ್ಚಂದ್ರನು ಬಹುಮಾನ ಕೊಡಲು ಹೋದಾಗ, ಅದನ್ನು ನಿರಾಕರಿಸಿ ಚಕ್ರವರ್ತಿತ್ವದ ಸಂಕೇತವಾದ ಮುತ್ತಿನ ಸತ್ತಿಗೆಯನ್ನು ಕೇಳುವುದು ಅವರ ಧೂರ್ತತನವಲ್ಲದೆ ಬೇರೇನೂ ಅಲ್ಲ. ಮೊದಲು ಶ್ವೇತಛತ್ರಿಯನ್ನು ಕೇಳಿ ಅದನ್ನು ಕೊಡಲು ನಿರಾಕರಿಸಿದಾಗ ತಮಗೆ ಗಂಡನಾಗೆಂದು ಪೀಡಿಸುವ ಈ ವರ್ತನೆ ದುರುದ್ದೇಶಪೂರಿತವಾದದ್ದು. ರಾಘವಾಂಕನು ಗಾನಗಾರ್ತಿಯರ ಪ್ರಸಂಗದಲ್ಲಿ ಜಾತೀಯತೆಯ ಮೂಲ ಸಮಸ್ಯೆಯನ್ನೆ ಕೈಗೆತ್ತಿಕೊಂಡು ಅದಕ್ಕೆ ಸೂಕ್ತವಾದ ವಿವರಣೆಯನ್ನು ಇಲ್ಲಿ ದೊರಕಿಸಿಕೊಡಲು ಪ್ರಯತ್ನಿಸಿದ್ದಾನೆ. 'ಶಾಪ ಹಾಗು ಕಾರಣಾಂತರದಿಂದಾದ ದುಷ್ಕುಲವು ಸತ್ಕುಲೀನರ ಸಂಗದಿಂದಾದರೂ ಶುದ್ಧವಾಗುವುದಾದರೇನೆಂಬ ಒತ್ತಾಸೆಯ ನುಡಿಗೆ ಬದಲಾಗಿ 'ಕುಲಧರ್ಮ ಆ ಪಂಥವಲ್ಲ. ಕೊಡವಾಲು ಕೆಡುಪೊಡೆ ಎನಿತಾಮ್ಲಬೇಕು" (ಹ.ಕಾ.ಸ್ಥ.7-22) ಎಂದು ಪ್ರಶ್ನಿಸುತ್ತಾನೆ. ಇಲ್ಲಿ ರಾಘವಾಂಕನ ಸಮಕಾಲೀನ ಸಾಮಾಜಿಕ ಪರಂಪರೆ ಹಾಗು ಪ್ರಗತಿ ಇವುಗಳ ವೈಚಾರಿಕ ಘರ್ಷಣೆಯ ಚಿತ್ರಣವಿದೆ. ರಾಘವಾಂಕನಿಗೆ ಗಾನಗಾರ್ತಿಯರ ಬಗ್ಗೆ ಪ್ರೀತಿ ಕನಿಕರವಿದ್ದರೂ ಅವರ ವರ್ತನೆಯ ಬಗೆಗೆ ಜುಗುಪ್ಸೆ ಇದೆ. ಆದ್ದರಿಂದಲೇ ಹರಿಹರನು ಹೊಲೆಯರನ್ನು (ಮಾದಾರ ಚನ್ನಯ್ಯ) ಬಾಚಿ ತಬ್ಬಿಕೊಂಡಂತೆ ರಾಘವಾಂಕನು ಗಾನಗಾರ್ತಿಯರನ್ನು ತಬ್ಬಿಕೊಳ್ಳದೆ ದೂರ ಇಟ್ಟಿದ್ದಾನೆ.

2) <u>ಹುಟ್ಟಿನಿಂದಲೇ ಹೊಲೆಯನಾದ ವೀರಬಾಹುಕ</u>:

ರಾಘವಾಂಕನು ವೀರಬಾಹುಕನನ್ನು ಹೊಲೆಯ ಕುಲದಲ್ಲಿ ಹುಟ್ಟಿದಂತೆ ಚಿತ್ರಿಸಿದ್ದರೂ ಕೂಡ ಹರಿಶ್ಚಂದ್ರನನ್ನು ಕೊಂಡುಕೊಂಡು ಅವನನ್ನು ಗಂಭೀರವಾಗಿಯೇ ನಡೆಸಿಕೊಳ್ಳುತ್ತಾನೆ.

> ............... ಕಾರೊಡಲು ಕೆಂಗಣ್ಣು
> ಕುಡಿದು ಕೊಬ್ಬಿದ ಬಸುರು ದಡದಡಿಸಿ ತರಹರಿಸು
> ವಡಿಯ ಕೆದರಿದ ತಲೆಯನಡಸಿ ಸುತ್ತಿದ ಮುಪ್ಪುರಿಯ ಬಾರ ಕಟ್ಟಣಿಗೆಯ
> ಬಿಡದೆ ಧರ್ರನೆ ತೀಗಿ ನೆರವಿಯುಂ ಬಯ್ವ ಬಿರು
> ನುಡಿಯ ........... ’’ (ಹ.ಕಾ.ಸ್ಥ.11-87)

ವೀರಬಾಹುಕನು ನೋಡಲು ವಕ್ರನಂತಿದ್ದರೂ ಅಂತರಂಗದಲ್ಲಿ ಸದುದ್ದೇಶವುಳ್ಳವನಾಗಿದ್ದಾನೆ. ಬಾಹ್ಯ ನೋಟಕ್ಕೆ ಹೊಲೆಯನಂತೆ ಕಂಡರೂ ಕೂಡ ಅಂತರಂಗದಲ್ಲಿ ದುರುದ್ದೇಶವಿಲ್ಲ. ‘‘ಹೊಲೆತನದ ಪ್ರತೀಕವಾದ ಗಾಣಗಾತಿ ‘ಹೊಲತಿ’ ಯರಿಗೂ, ಹೊಲೆಯ ಕುಲದಲ್ಲೇ ಹುಟ್ಟಿದ ವೀರ ಬಾಹುಕನಿಗೂ ಇರುವ ಸ್ವಭಾವದಲ್ಲಿಯ ಮೇಲ್ಕಾಣಿಸಿದ ವ್ಯತ್ಯಾಸವನ್ನು ಗಮನಿಸಿದರೆ, ಗಾಣಗಾತಿಯರ ‘ಹೊಲೆತನ’ವೆ ನಿಜವಾದ ‘ಹೊಲೆ’ ಎನಿಸುತ್ತದೆ. ‘ಹೊಲೆತನ’ ಎನ್ನುವುದು ವ್ಯಕ್ತಿಯ ಅಂತರಂಗದ ಅವಗುಣಗಳಿಗೆ ಸಂಬಂಧಿಸಿದ್ದೇ ಹೊರತು, ಅದು ಒಂದು ಜಾತಿಯನ್ನು ಕುರಿತ ಪ್ರಶ್ನೆಯಲ್ಲ ಎನ್ನುವ ತಾತ್ವಿಕ ದೃಷ್ಟಿ ರಾಘವಾಂಕನದು’’. (ಶಿವರುದ್ರಪ್ಪ :1982:136)

3) <u>ಸತ್ಕುಲ ಪ್ರಸೂತನಾದರೂ ಅನಿವಾರ್ಯವಾಗಿ ಹೊಲೆಯನಾಗಬೇಕಾಗಿ ಬಂದ ರಾಜ ಹರಿಶ್ಚಂದ್ರ</u>:

ರಾಘವಾಂಕನು ಹರಿಶ್ಚಂದ್ರನ ಪಾತ್ರದ ಮೂಲಕ, ಅಂದಿನ ಸಮಾಜದಲ್ಲಿ ಹೊಲೆಯರ ಬಗ್ಗೆ ಉತ್ತಮ ಕುಲಜರ ವಿಚಾರಗಳನ್ನು ತಿಳಿಸುವನು. ಸತ್ಕುಲ ಸಂಜಾತರಿಗೆ ತಮ್ಮ ಕುಲದ ಬಗ್ಗೆ ಹೆಮ್ಮೆ, ಅಭಿಮಾನ, ಇರುವುದು ಸಹಜ. ಸಾಮಾನ್ಯವಾಗಿ ಇಂತಹವರು ಸಾಮಾಜಿಕವಾಗಿ ಕೀಳುಕುಲದವರನ್ನು ಸೋಂಕುವುದಾಗಲಿ, ಅವರನ್ನು ಮದುವೆಯಾಗುವುದಾಗಲಿ, ಅವರ ಆಳಾಗುವುದಾಗಲಿ ಯಾರೂ ಇಷ್ಟಪಡುವುದಿಲ್ಲ. ಹೀಗಿರುವಾಗ ರವಿಕುಲಜನಾದ, ಚಕ್ರವರ್ತಿಯಾದ ಹರಿಶ್ಚಂದ್ರನು, ತನಗಿಂತ ಕೀಳುಕುಲದವರನ್ನು ಮದುವೆಯಾಗುವುದಾಗಲಿ, ಅವರಿಗೆ ಆಳಾಗುವುದಾಗಲಿ, ಕನಸಿನಲ್ಲಿಯೂ ಕೂಡ ಎಣಿಸನು. ಆದರೆ ಈ ಕ್ರಿಯೆ ಅನಿವಾರ್ಯವಾದಾಗ ಹರಿಶ್ಚಂದ್ರನು ಅದಕ್ಕೆ ಯಾವ ರೀತಿ ಪ್ರತಿಸ್ಪಂದಿಸುವನು ಎನ್ನುವುದನ್ನು ಇಲ್ಲಿ ಹರಿಶ್ಚಂದ್ರನ ಮೂಲಕ ರಾಘವಾಂಕ ತನ್ನ ಅಭಿಪ್ರಾಯವನ್ನು ಅಂದರೆ ಆತನ ಸಮಕಾಲೀನ ಸಮಾಜದ ಅಭಿಪ್ರಾಯವನ್ನು ಹೇಳುವನು.

ಹರಿಶ್ಚಂದ್ರನಿಗೆ ಹೊಲತಿಯರಾದ ಗಾಣಗಾತಿಯರಿಂದ ಮೊದಲು ಪ್ರಾಪ್ತವಾಗುವ ಅವಮಾನದಿಂದ ಹಿಡಿದು, ಅವನು ವೀರಬಾಹುಕನ ಆಳಾಗುವವರೆಗೆ ಅವನು ಹೊಲೆಯರೊಂದಿಗೆ ಮಾಡಿಕೊಳ್ಳ

ಬೇಕಾದ ಒಡಂಬಡಿಕೆ ಚಿತ್ರಿಸಲ್ಪಟ್ಟಿದೆ. ಹರಿಶ್ಚಂದ್ರನನ್ನು ಹೊಲತಿಯರು ಬಂದು ಮದುವೆ ಮಾಡಿಕೋ ಎಂದು ಪೀಡಿಸಿದಾಗ,

"ಲಲಿತ ವಸುಮತಿ ಹುಟ್ಟುವಂದು ಹುಟ್ಟಿದ ಸೂರ್ಯ
ಕುಲದ ರಾಯರ್ಗೆ ವಂಶದೊಳು ಕೀರ್ತಿಯೊಳು ಭುಜ
ಬಲದೊಳೊರೆದೊರೆಯೆನಿಸಿ ಕನ್ನಿಕೆಯರಂ ಕೊಡುವ ಭೂಪರಿಲ್ಲೆಂದುತನಕ
ಹೊಲತಿಯರು ಬಂದಾವು ಸತಿಯರಾದಪ್ಪೆವೆಂ
ಬುಲಿಹವೆಂಬುದು ಬಂದ ಕಾಲಗುಣವೋ ನಿಂದ
ನೆಲದ ಗುಣವೋ ನೋಡು ನೋಡೆಂದು ಕಡುಮುಳಿದು ಕೋಪಿಸಿದನವನೀಶನು"

(ಹ.ಕಾ.ಸ್ಥ 7–16)

ಹರಿಶ್ಚಂದ್ರನ ಪಾಲಿಗೆ ಹೊಲತಿಯರು ಬಚ್ಚಲ ನೀರಿನಂತೆ. ನಾಯಿಯ ಮೊಲೆಯೊಳ ಉಳ್ಳ ಹಾಲಿನಂತೆ, ಪ್ರೇತವನದೊಳಗಿನ ಹೂವಿನಂತೆ. (ಹ.ಕಾ.ಸ್ಥ.7–18)

ವಿಶ್ವಾಮಿತ್ರ ಮುನಿಯು ಬಂದು ತನ್ನ ಮಕ್ಕಳನ್ನು ಮದುವೆಯಾಗು ಎಂದಾಗ,

"ಉತ್ತಮದ ರವಿಕುಲದೊಳುದಿಸಿ ಚಾಂಡಾಲತ್ವ
ವೆತ್ತ ಸತಿಯರ್ಗಳಿಸಿ ಘೋರನರಕಾಳಿಗ ನಿ
ಮಿತ್ತ ಹೋಹವನಲ್ಲ.............." (ಹ.ಕಾ.ಸ್ಥ.8–25)

ಎಂದು ಹೇಳಿ ಪದೇ ಪದೇ ಕೇಳತಕ್ಕ ವಿಶ್ವಾಮಿತ್ರನಿಗೆ,

"ಎಡೆಬಿಡದೆ ಬೇಡಿ ಕಾಡುವಿರಾದಡಿನ್ನು ಕೇಳಿ
ಕಡೆಗೆನ್ನ ಸರ್ವರಾಜ್ಯವನಾದಡಂ ನಿಮಗೆ
ಕೊಡಹಡೆವೆನ್ನ ಸಲ್ಲದೀಯೊಂದು ತೇಜಮಂ ಕೊಡನೆಂದು ಭೂಪಾಲನು"

(ಹ.ಕಾ.ಸ್ಥ.8–32)

ಸಮಸ್ತ ರಾಜ್ಯವನ್ನಾದರೂ ಕೊಟ್ಟೇನೆ ಹೊರತು ಹೊಲತಿಯರನ್ನು ಮದುವೆ ಆಗಲಾರೆ ಎಂದು ಹೇಳುವಲ್ಲಿ ತನ್ನ ಉತ್ತಮ ಕುಲದ ಬಗ್ಗೆ ಇದ್ದ ಪ್ರತಿಷ್ಠೆ, ಗೌರವ ವ್ಯಕ್ತವಾಗುತ್ತದೆ.

ಕಾಶಿಯಲ್ಲಿ ತನ್ನ ಸತಿಸುತರನ್ನು ಬ್ರಾಹ್ಮಣನಿಗೆ ಮಾರಿದ ಮೇಲೆ ತನ್ನನ್ನು ಮಾರಿಕೊಳ್ಳಲು ಘೋಷಿಸುತ್ತಿರುವಾಗ ವೀರಬಾಹುಕನು ತನ್ನ ಆಳನ್ನು ಕೇಳಲು ಕಳುಹಿಸಿದನು. ಆಗ ಹರಿಶ್ಚಂದ್ರನು ಕೊಡತಕ್ಕ ಉತ್ತರದಲ್ಲಿ ಅಂದಿನ ಸಮಾಜದಲ್ಲಿ ಕೀಳುಕುಲದ ಬಗ್ಗೆ ಇದ್ದ ಜನರ ಅನಿಸಿಕೆ ವ್ಯಕ್ತವಾಗುತ್ತದೆ.

"ಕಡೆಯ ಹೊಲೆಯಂ ಮೇರೆದಪ್ಪಿ ಬಂದೆನ್ನ ತ
ನ್ನೊಡೆಯಂಗೆ ದಾಸನಾಗೀಗಳೆಂದೆಂಬುದಿದು ಕಾಲಗುಣವೋ ಎನ್ನನು
ಎಡೆಗೊಂಡ ಕರ್ಮಫಲವೋ.........." (ಹ.ಕಾ.ಸ್ಥ.11–19)

"ಇಲ್ಲಿ ಹರಿಶ್ಚಂದ್ರ ಬಳಸುವ 'ಕಡೆಯ ಹೊಲೆಯ' ಮತ್ತು 'ಮೇರೆದಪ್ಪಿ ಬಂದು' ಎಂಬ

ಎರಡು ಮಾತುಗಳಲ್ಲಿನ ಪ್ರತಿಕ್ರಿಯೆಯನ್ನು ಪರಿಭಾವಿಸಬೇಕು. ಅವನು ರಾಜ್ಯಭ್ರಷ್ಟನಾಗಿ ನಿರ್ಗತಿಕನಾದರೂ, ತಾನು ಸಾಮಾಜಿಕವಾಗಿ ಅಧಮವರ್ಗದ ಅನಾಮಿಕರಿಗಿಂತ ಶ್ರೇಷ್ಠ ಎಂಬ ಅಭಿಮಾನ ಸಹಜವಾಗಿದೆ. ಅವನ ಪಾಲಿಗೆ ವೀರಬಾಹುಕ 'ಕಡೆಯ ಹೊಲೆಯ' ಸಾಮಾಜಿಕವಾಗಿ ಕಟ್ಟಕಡೆಯ ನೆಲೆಯಲ್ಲಿರಬೇಕಾದವನು; ಅಂಥವನು, 'ಮೇರೆದಪ್ಪಿ' — ಯಾವ ಮಿತಿಯಲ್ಲಿ ಬದುಕಬೇಕೋ ಆ ಸಾಮಾಜಿಕ ಮಿತಿಯನ್ನು ಮೀರಿ ಬರಬಹುದೇ ಎನ್ನುವ ತಿರಸ್ಕಾರವೇ ಈ ಪ್ರತಿಕ್ರಿಯೆಯಲ್ಲಿ ಪ್ರಧಾನವಾಗಿದೆ. ಇದು 'ಹೊಲೆಯ' ರನ್ನು ಕುರಿತು ಹರಿಶ್ಚಂದ್ರನ ಪ್ರತಿಕ್ರಿಯೆ; ಅಷ್ಟೇ ಅಲ್ಲ ರಾಘವಾಂಕನ ಕಾಲದಲ್ಲಿ ಇದ್ದಿರಬಹುದಾದ ಉಚ್ಚವರ್ಗದವರ ಪ್ರತಿಕ್ರಿಯೆ ಕೂಡ ಆಗಿದೆ.
(ಶಿವರುದ್ರಪ್ಪ:1982:139)

ಹರಿಶ್ಚಂದ್ರನ ಮಾತನ್ನು ಕೇಳಿ ಬಂದ ವೀರಬಾಹುಕನು

"ಕೀಳಾರು ಮೇಲಾರು ಹದುಳಿಪ್ಪ ನಾನು ಚಾಂ
ಡಾಳನೋ ಹುಸಿಯ ಹೊಲೆಯಂ ಹೊರುವ ನೀನು ಚಾಂ
ಡಾಳನೋ ............" (ಹ.ಕಾ.ಸ್ಥ.11–20)

ಎಂದು ಪ್ರಶ್ನಿಸಿದಾಗ ಹರಿಶ್ಚಂದ್ರನಿಗೆ ತನ್ನ ತಪ್ಪಿನ ಅರಿವಾಗಿ "ರವಿಕುಲಕ್ಕೆ ಕುಂದಿಂದು ಬಂದಡಂ ಬರಲೆಂದು" ವೀರಬಾಹುಕನ ಆಳಾಗುವನು. ಇಲ್ಲಿ ಹರಿಶ್ಚಂದ್ರನಲ್ಲಿ ಕುಲದ ಬಗ್ಗೆ ಉನ್ನತ ಭಾವನೆಯನ್ನಿಟ್ಟುಕೊಂಡು ಚಾಂಡಾಳನ ಸೇವಕನಾಗಿಲ್ಲ. ಇದು ಅವನ ಅನಿವಾರ್ಯತೆಗೆ ಶರಣಾದುದರ ಸೂಚನೆಯೆ ಹೊರತು ಆತನಲ್ಲಿ ಹೊಲೆಯರೆಂಬ ಸಾಮಾಜಿಕ ವರ್ಗದ ಬಗೆಗೆ ಒಂದು ಬಗೆಯ ತಾತ್ವಿಕ ಜ್ಞಾನೋದಯವಾಯಿತೆನ್ನುವುದರ ಸೂಚನೆ ಅಲ್ಲ.

ಕೊನೆಗೆ ಶಿವಸಾಕ್ಷಾತ್ಕಾರವಾದಾಗಲೂ ಸಹಿತ ತಾನು ಚಂಡಾಲನ ಕಿಂಕರನಾದುದಕ್ಕೆ, ಅದರಿಂದ ಆದ ಅನರ್ಥ ಪರಂಪರೆಗೆ ವ್ಯಥೆಪಡುತ್ತಾನೆ ಹರಿಶ್ಚಂದ್ರ.

"......... ಚಂಡಾಲ ಕಿಂಕರನಾಗಿ ಹೊಲೆವೇಷ
ವನು ಹೊತ್ತು ಸುಡುಗಾಡ ಕಾದು ಶವಶಿರದಕ್ಕಿ
ಯನು ಬೇಸದುಂಡು ಜೀವಿಸುವೆ ವರಪುತ್ರನಳಿ ದುದನು ಕಣ್ಣಾರೆಕಂಡು
ಧನ ಪತಿವ್ರತೆಯಪ್ಪ ನಿಜಸತಿಯ ಕೆಟ್ಟಂದ ನೀ
ಚನು ಮೂರ್ಖನು ......." (ಹ.ಕಾ.ಸ್ಥ.14–5)

ಎಂದು ತಾನು ಚಂಡಾಲ ಕಿಂಕರನಾದುದಕ್ಕೆ ವ್ಯಥೆಪಡುವಂತೆ ತೋರಿದರೂ ಪಂಪಾಪತಿಯೇ ಅವನಿಗೆ

"ಧನಸತ್ಯವೇ ಜೀವವೆಂದಿರ್ದ ನಿನ್ನ ಹೊಲೆ
ಯನ ಸೇವೆ ಗುರುಸೇವೆ ಹೊತ್ತ ಹೊಲೆ ವೇಷ ಪಾ
ವನ ಪುಣ್ಯವೇಷ ಸುಡುಗಾಡ ರಕ್ಷಿಸದಿರವು ತಾಯಜ್ಞರಕ್ಷೆಯಿರವು" (ಹ.ಕಾ.ಸ್ಥ.14–17

ಎಂದು ಹರಿಶ್ಚಂದ್ರನು ಚಂಡಾಲ ಕಿಂಕರನಾಗಿ ಮಾಡಿದ ಸೇವೆಯನ್ನು ಗುರುಸೇವೆಯೆಂದೂ,

ಸ್ಮಶಾನ ಕಾಯುವಿಕೆ ಯುದ್ಧಕ್ಕೆ ಒದಗಿಸಿದ ರಕ್ಷೆಯೆಂದು ಸಮಾಧಾನ ನುಡಿವನು. ಕೊನೆಗೆ ಕವಿಯು ಹೊಲೆತನದ ಬಗ್ಗೆ ಕ್ರಾಂತಿಕಾರಿಯೂ, ನವೀನವೂ, ಆದರಣೀಯವೂ ಆದ ವ್ಯಾಖ್ಯಾನವನ್ನು ಹೇಳುವನು.

'' ಅತಿ ಹುಸಿವ ಯತಿ ಹೊಲೆಯ ಹುಸಿಯದಿಹ ಹೊಲೆಯನು
ನುತ ಯತಿವರನು ಹುಸಿದು ಮಾಡುವ ಮಹಾಯಜ್ಞ
ಶತವೆಯ್ದೆ ಪಂಚಪಾತಕ ಸತ್ಯವೆರಸಿದ ನ್ಯಾಯವದು ಅಂಗಾರ್ಚನೆ
ಶ್ರುತಮತವಿದೆ''.......... (ಹ.ಕಾ.ಸ್ಥ.14-10)

ಎಂಥ ಉತ್ತಮ ಕುಲದಲ್ಲಿ ಹುಟ್ಟಿದರೂ ತ್ರಿಶಂಕುವಿನಂತೆ ' ಅವಗುಣಂಗಳ ಸಂಗದಿಂ ಕುಲಂ ಹಸಗೆಟ್ಟು ಚಂಡಾಲನಾಗಬಹುದು. ಅವನ ಹೊಟ್ಟೆಯಲ್ಲಿ ಹುಟ್ಟಿದವನಾದರೂ ಹರಿಶ್ಚಂದ್ರನು ಗುಣಸಾಹಚರ್ಯದಿಂದ ಸರ್ವಗ್ರಾಹ್ಯನೂ, ಪೂಜ್ಯನೂ ಆಗುತ್ತಾನೆ.

ಕುಲದ ವಿಚಾರವನ್ನು ಚರ್ಚಿಸುತ್ತ ಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ, '' ಕುಲಂ ಕುಲಮಲ್ತು, ಚಲಂ ಕುಲಂ, ಅಣ್ಮು ಕುಲಂ..... ಅಭಿಮಾನಮೊಂದೆ ಕುಲಂ'' ಎಂದು ಅಂದಿನ ಯುಗಮೌಲ್ಯಗಳನ್ನು ಎತ್ತಿಹಿಡಿದಿದ್ದಾನೆ. ಹಾಗೆಯೇ '' ಪೂರ್ವೋಕ್ತ ಗುಣಕರ್ಮ ಪರಿಶೀಲನೆಯಿಂದ ರಾಘವಾಂಕನು ವಿಚಾರ ಪರಿಪುಷ್ಟವಾಗಿದ್ದ ಸತ್ಯಧರ್ಮಗಳ ತಿರುಳನ್ನು ಕಾಣಬೇಕೆಂದಿದ್ದ ಸಿದ್ಧರಾಮ, ಅಲ್ಲಮ, ಬಸವೇಶ್ವರ ಮುಂತಾದ ಧರ್ಮಜ್ಯೋತಿಗಳ ಕಾಲದಲ್ಲಿ ಜಾತಿಕುಲಗಳನ್ನು ಆತ್ಮಗುಣಗಳ ದೃಷ್ಟಿಯಿಂದ ತೀರ್ಮಾನ ಮಾಡಬೇಕೆಂಬ ಆ ಕಾಲದ ಉದಾರ ತತ್ವಗಳನ್ನು (ಕೃಷ್ಣಶಾಸ್ತ್ರಿ: iv ) ತನ್ನ ಕಾವ್ಯದಲ್ಲಿ ತಂದಿದ್ದಾನೆ. ಹಾಗೆಯೇ ಹರಿಶ್ಚಂದ್ರಕಾವ್ಯದಲ್ಲಿ ಹೊಲತಿಯರ ಸಮಸ್ಯೆಯನ್ನು ತಂದು ಹಾಕಿಕೊಂಡಿರುವುದು ಬಸವಯುಗದ ಸಮಷ್ಟಿಪ್ರಜ್ಞೆಯ ಜಾಗೃತಿಯನ್ನು ಪ್ರತಿಬಿಂಬಿಸುತ್ತದೆ.'' ( ಸೂರ್ಯನಾರಾಯಣ :1988: 180)

ದಾನಧರ್ಮ :

ಭಾರತೀಯರಿಗೆ ಇಹಲೋಕಕ್ಕಿಂತ ಪರಲೋಕದ ಕಡೆಗೆ ಹೆಚ್ಚು ಒಲವು. ಆ ಪರಲೋಕ ಪ್ರಾಪ್ತಿಗೆ ಹಲವಾರು ಆಚರಣೆಗಳನ್ನು ಆಚರಿಸುತ್ತಿದ್ದರು. ಅಂತಹ ಆಚರಣೆಗಳಲ್ಲಿ ದಾನವು ಒಂದು. ಪ್ರಾಚೀನ ಕಾಲದಲ್ಲಿ ರಾಜರು ದಾನಧರ್ಮಗಳನ್ನು ಮಾಡುವುದರಲ್ಲಿ ಹೆಸರುವಾಸಿಯಾಗಿದ್ದರು. ಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ, ಬೇಡಿದ್ದನ್ನು ಬೇಕಾದಷ್ಟು ಕೊಡತಕ್ಕ ಕರ್ಣನ ದಾನಗುಣವನ್ನು ಕುರಿತು '' ಬೇಡಿಂ ಓಡಿಂ ಎಂಬುದು ಕರ್ಣನ ಅಭಿಮತ'' ವಾಗಿತ್ತೆಂದು ಹೇಳುವನು. ಕರ್ಣನು, ದಾನವನ್ನು ಅಪೇಕ್ಷಿಸಿ ಬಂದವರಿಗೆ ಇಲ್ಲವೆನ್ನದೆ ಕೊಡತಕ್ಕ ಕೊಡುಗೈ ದೊರೆಯಾಗಿದ್ದನಲ್ಲದೆ ರಣರಂಗದಲ್ಲಿ ವೈರಿಗಳು ಈತನಿಗೆ ಬೆನ್ನು ತೋರಿ ಓಡಿಹೋಗಬೇಕು ಅಂತಹ ವೀರನಾಗಿದ್ದನ

ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಧನಕನಕ ದಾನ ಹಾಗು ಭೂದಾನಗಳನ್ನು ಕಾಣುತ್ತೇವೆ.

ಹರಿಶ್ಚಂದ್ರನ ದಿನನಿತ್ಯದ ಬೆಳಗಿನ ಆಚರಣೆಗಳಲ್ಲಿ ದಾನ ಮಾಡುವುದು ಒಂದಾಗಿತ್ತು — ಎನ್ನುವುದು ವಿದಿತ ಶಿವಲಿಂಗ ಪೂಜಾಸುಖಮನೆಯ್ದಿ ನಿಯಮದ ದಾನಧರ್ಮಗಳಂ ಮಾಡಿ, "(ಹ.ಕಾ.ಸ್ಥ.4–59) ಎಂಬ ಪದ್ಯದಿಂದ ತಿಳಿಯುತ್ತದೆ. ಯಜ್ಞಗಳ ಕಾಲಕ್ಕೆ ಗುರುಮುನಿಗಳಿಗೆ " ಆವಾವ ಮುನಿಗಳಾವಾವ ಧನವಂ ಬೇಡಲೊಲೀವಿ ಕೊಟ್ಟು (ಹ.ಕಾ.ಸ್ಥ.3–5) ಉಪಚರಿಸುತ್ತಿದ್ದನು. ವಿಶ್ವಾಮಿತ್ರ ಮುನಿಯು,

" ಪಿರಿಯ ಕರಿಯಂ ಮೆಟ್ಟಿ ಕವಡೆಯಂ ಮಿಡಿದೊಡೆನಿತುದ್ದಮಂ ಪೋಪುದದರ
ಸರಿಮೆನಿಸಿ ಸುರಿದ ಹೊಸ ಹೊನ್ನ ರಾಶಿಯನೀವು
ದರಸಯೆಂದೆನೆ ಹಸಾದಂ ಕೊಟ್ಟನ......" (ಹ.ಕಾ.ಸ್ಥ.3–7)

ವಿಶ್ವಾಮಿತ್ರನಿಗೆ ಅಷ್ಟೊಂದು ಅಪಾರವಾದ ಸಂಪತ್ತಿನ ರಾಶಿಯನ್ನು ದಾನಮಾಡಿದ ಹರಿಶ್ಚಂದ್ರನು ದಾನವೀರರಾದ ಕರ್ಣ, ಶಿಬಿ, ಜೀಮೂತವಾಹನ, ಬಲಿ ಚಕ್ರವರ್ತಿಯರಿಗಿಂತ ಕಡಿಮೆಯೇನಲ್ಲ. ಇವರು ತಮ್ಮ ದೇಹವನ್ನೇ, ಪ್ರಾಣವನ್ನೇ ದಾನ ಮಾಡಿದರೆ ಹರಿಶ್ಚಂದ್ರ ರಾಜನು ತತ್ವನಿಷ್ಠನಾಗಿ ತನ್ನ " ಸರ್ವಸಾಮ್ರಾಜ್ಯಮಂ ಮುನಿಗೆ ಧಾರೆಯನೆರೆದನು" (ಹ.ಕಾ.ಸ್ಥ.8–45) ಈ ರೀತಿಯಾಗಿ ನಡೆಯುವ ದಾನವನ್ನು ಧಾರಾಪೂರ್ವಕವಾಗಿ ಮಾಡುವುದು ದಾನದ ಒಂದು ವೈಶಿಷ್ಟ್ಯವಾಗಿತ್ತು.

ವಿರೂಪಾಕ್ಷ ದೇವಸ್ಥಾನದ ಅರ್ಚಕರಾದ ಬ್ರಾಹ್ಮಣರಿಗೆ ಹರಿಶ್ಚಂದ್ರನು ದಾನ ನೀಡಿ ಶಾಸನವನ್ನು ಬರೆಸಿದುದು ಈ ಪದ್ಯದಿಂದ ತಿಳಿದು ಬರುತ್ತದೆ.

" ಗಂಗೆಯುತ್ತಡಿಯ ಕರದ ಗ್ರಾಮ ವಿರೂಪಾಕ್ಷ
ಲಿಂಗ ಭೋಗಕ್ಕೆಂದು ಧಾರೆಶಾಸನ ನೃಪ
ಪುಂಗವ ಹರಿಶ್ಚಂದ್ರರಾಯನೊಲಿದಿತ್ತು" (ಹ.ಕಾ.ಸ್ಥ.5–82)

ಈ ರೀತಿಯಾಗಿ ರಾಘವಾಂಕನ ಕಾಲದಲ್ಲಿ ದಾನ ಮಾಡತಕ್ಕ ಪದ್ಧತಿ ಇತ್ತೆಂಬುದು ತಿಳಿದು ಬರುತ್ತದೆ.

III) <u>ಮೂಢ ನಂಬಿಕೆಗಳು</u>:

ಆಸ್ತಿಕರಾದ ಜನ ದೇವರ ಹೆಸರಿನಲ್ಲಿ ಹಲವಾರು ಅರ್ಥಹೀನ ಆಚರಣೆಗಳನ್ನು ಅಂಧಾನುಕರಣೆಯಿಂದ ಮಾಡುತ್ತಿದ್ದರು. ಇಂಥ ಆಚರಣೆಗಳನ್ನೆಲ್ಲ ಈ ಮೂಢ ನಂಬಿಕೆಗಳು ಒಳಗೊಂಡಿವೆ. ಆಣೆ ಹಾಕುವುದು, ಸೂರುಳಿಡುವುದು; ಮುತ್ತೈದೆ ಸಾವಿನಲ್ಲಿ ನಂಬಿಕೆ, ಹರಕೆ ಹೊರುವುದು, ಸ್ತ್ರೀಹತ್ಯ ಬ್ರಾಹ್ಮಣ ಹತ್ಯದಿಂದ ನರಕಪ್ರಾಪ್ತಿಯಾಗುವುದೆಂಬ ನಂಬಿಕೆ ಮುಂತಾದವುಗಳು ಈ ಮೂಢನಂಬಿಕೆಯಿಂದ ಕೂಡಿದವುಗಳಾಗಿವೆ.

i) ಆಣೆ ಇಡುವುದು:

ಆಣೆ ಇಡುವುದು ಅಂದಿನ ಒಂದು ಸಾಮಾಜಿಕ ರೂಢಿಯಾಗಿತ್ತು. ಆಣೆಗಳನ್ನು ಮೀರುವು ದೆಂದರೆ ಅನಿಷ್ಟಕಾರಕವೆಂದೇ ಜನರು ಭಾವಿಸುತ್ತಿದ್ದರು. ಹರಿಶ್ಚಂದ್ರನು ತನ್ನನ್ನು ಕಳುಹಲು ಬಂದ ಪುರಜನರನ್ನು ತಡೆಯಲು "ಬಂದಡೆ ತ್ರಿಶಂಕುನರೇಂದ್ರನಾಣೆ" (ಹ.ಕಾ.ಸ್ಥ.9-20) ಎನ್ನುವನು. ದಳ್ಳುರಿಯನ್ನು ಪ್ರವೇಶಿಸಲು ಹೊರಟ ಸತ್ಯಕೀರ್ತಿಯನ್ನು ಹರಿಶ್ಚಂದ್ರನು......... "ನೀಂ ಮುಂದೆ ಹೋದಡೆನ್ನಾಣೆ" ಎಂದು (ಹ.ಕಾ.ಸ್ಥ.9-17) ಆಣೆ ಇಡುವನು. ಮಧ್ಯರಾತ್ರಿಯಲ್ಲಿ ಸುಡುಗಾಡಿನಲ್ಲಿ ಲೋಹಿತಾಶ್ವನ ಶವಸಂಸ್ಕಾರಕ್ಕೆ ಸಿದ್ಧಳಾದ ಚಂದ್ರಮತಿಗೆ...."ಸುಟ್ಟೆಯಾದಡೆ ನಿನಗೆ ವೀರಬಾಹುಕನ ಆಣೆ" (ಹ.ಕಾ.ಸ್ಥ.12-36) ಎಂದು ಆಣೆ ಇಡುವನು. ಈ ಸಂಗತಿಗಳು ಅಂದಿನ ಸಮಾಜದಲ್ಲಿ ಆಣೆ ಇಡುವ ಪದ್ಧತಿಯನ್ನು ತೋರಿಸುತ್ತವೆ. ಅದು ತನ್ನ ಒಡೆಯನ ಮೇಲೆ ಆಣೆ ಇಡುವುದು ಕಂಡು ಬರುತ್ತದೆ.

ii) ಸೂರುಳಿಡುವದು:

ಆಣೆ ಇಡುವಂತೆಯೇ ಸೂರುಳಿಡುವದು ಅಂದಿನ ಸಮಾಜದಲ್ಲಿ ವಿಶಿಷ್ಟ ಪದ್ಧತಿಯಾಗಿತ್ತೆಂದು ಕಂಡು ಬರುತ್ತದೆ. ಸೂರುಳಿಡುವದು ಎಂದರೆ ಕೊಟ್ಟ ಮಾತಿಗೆ ತಪ್ಪುವದಿಲ್ಲವೆಂದು ಪ್ರತಿಜ್ಞಾ ಪೂರ್ವಕವಾಗಿ ಮಾತು ಕೊಡುವುದು. ಹರಿಶ್ಚಂದ್ರನು ವಿಶ್ವಾಮಿತ್ರನಿಗೆ ಧನವನ್ನು ಗಳಿಸಿ ತೆರಕಾರನಿಗೆ ಕೊಡುವೆನು ಆತನನ್ನು ನಿಯಮಿಸು ಎಂದು ಕೇಳಿದಾಗ ವಿಶ್ವಾಮಿತ್ರನು,

"ಬಲ್ಲದನನೊಬ್ಬನಂ ಕೊಡುವೆನಾತಂಗೆ ಧನ
ವೆಲ್ಲವಂ ನಿರ್ಣಯಿಸಿ ಕೊಡುವಂತಿರೆನಗಿಲ್ಲ
ಹೊಲ್ಲಹಂ ಸೂರುಳಂ ಸೂರುಳಿಡು ಬೇಗ....." (ಹ.ಕಾ.ಸ್ಥ.8-56)

ಎನ್ನಲು,

"ಶಿವಪೂಜೆಯ ಮಾಡದವನು ಗುರ್ವಾಜ್ಞೆಗೆ
ಟ್ಟವನು ಪರಸತಿಗಳುಪುವವನು.......
ಟ್ಟವನಿಳಿವ ನರಕದೊಳಗಿಳಿವೆನವಧಿಗೆ ನಿಮ್ಮ ಧನವನೀಯದಡೆ" (ಹ.ಕಾ.ಸ್ಥ.8-57)

ಎಂದು ಪ್ರಜ್ಞಾಪೂರ್ವಕವಾಗಿ ಒಪ್ಪಿಕೊಂಡನು. ಕೊಟ್ಟ ಮಾತಿಗೆ ತಪ್ಪಿ ನಡೆಯುವುದು ಅನಿಷ್ಟ ಪ್ರಾಪ್ತಿಗೆ ಕಾರಣ ಅಷ್ಟೇ ಅಲ್ಲ, ತಪ್ಪಿತಸ್ಥರಿಗೆ ಉಂಟಾಗುವ ಪ್ರಾಯಶ್ಚಿತ್ತ ತಮಗೂ ಉಂಟಾಗಲಿ ಎಂದು ಸ್ವಸಂತೋಷದಿಂದ ನೀಡಿದ ಒಪ್ಪಿಗೆಯಾಗಿದೆ. ಇದು ಅಂದಿನ ಸಾಮಾಜಿಕ ವಿಶೇಷ ಪದ್ಧತಿ ಯಾಗಿರುವಂತೆ ತಿಳಿದುಬರುತ್ತದೆ.

ಪಂಚ ಮಹಾಪಾತಕಗಳಾದ ಸ್ತ್ರೀ ಹತ್ಯೆ, ಬ್ರಾಹ್ಮಣ ಹತ್ಯೆಗಳಿಗೆ ಕಾರಣನಾದವನು ನರಕಕ್ಕೆ ಹೋಗುವನು ಎಂಬ ನಂಬಿಕೆ ಅಂದಿನ ಸಮಾಜದಲ್ಲಿ ಇತ್ತೆಂಬುದು ತಿಳಿಯುತ್ತದೆ.

''ಉತ್ತಮ ಕುಲೀನನತ್ಯಧಿಕ ವಿಪ್ರಂ ವೇದ
ವೇತ್ತ ಸರ್ವಾಗಮಜ್ಞಂ ಶೈವನೆತಿ ನೆರೆ ನರೆಯ
ಹೊತ್ತವನು ಮನೆಯ ಮಕ್ಕಳಂ ಬಿಟ್ಟು ಬೆಂಬಳಿಯ ನಂಬಿ ಬಂದವನು! ನಿನ್ನ
ಮುತ್ತುವನ್ನಿಗೆ ಮುಂದೆ ನೂಕಿ ನರಕಾಳಗನಿ
ಮಿತ್ತ ನಡೆದಖಿಳಜಗವರಿಯಲಿ ಪಕೀರ್ತಿಯಂ
ಹೊತ್ತು ಕೊಂಬವನಲ್ಲ........'' (ಹ.ಕಾ.ಸ್ಥ. 10–17)

ಎನ್ನುವಲ್ಲಿ ಮೇಲ್ಕಾಣಿಸಿದವರ ಸಾವಿಗೆ ಕಾರಣರಾದವರು ನರಕಕ್ಕೆ ಹೋಗುವರು ಅಷ್ಟೆ ಅಲ್ಲ, ಲೋಕದ ಅಪಕೀರ್ತಿಗೂ ಗುರಿಯಾಗುತ್ತಾರೆಂಬ ನಂಬಿಕೆ ಅಂದಿನ ಸಮಾಜದಲ್ಲಿತ್ತೆಂದು ತಿಳಿದು ಬರುತ್ತದೆ. ಇದೇ ರೀತಿ ತನ್ನನ್ನೆ ನಂಬಿದಂತಹ ಸತಿ–ಸುತದನ್ನು ರಕ್ಷಿಸುವುದು ಪತಿಯ ಧರ್ಮ. ಅದನ್ನು ಹರಿಶ್ಚಂದ್ರನು ಇಲ್ಲಿ ಹೇಳಿರುವನು.

''.......... ತನ್ನ ಸತಿಸುತರ ಕಾಯ್ದಂ ತಾಂ
ಹೋದನೆನಿಸದೆ ಪ್ರಾಣಭೀತಿಯಿಂ ಕಡೆಮುತ್ತಿ
ಬೀದಿವರಿವುರಿಗಬಲೆಯಂ ಕೊಟ್ಟೆನೆಂಬ ಕುಂದಂ ಹೊರುವನಲ್ಲವೆಂದನು
(ಹ.ಕಾ.ಸ್ಥ.10–20)

ಸತಿಸುತರನ್ನು ರಕ್ಷಿಸದೆ ಇದ್ದರೆ ಅಪಕೀರ್ತಿಗೆ ಗುರಿಯಾಗುತ್ತಾರೆ ಎಂಬ ನಂಬಿಕೆ ಅಂದಿನ ಸಮಾಜದಲ್ಲಿತ್ತೆಂದು ತಿಳಿದು ಬರುತ್ತದೆ.

ಪ್ರಾಚೀನ ಕಾಲದಿಂದಲೂ ಅರ್ವಾಚೀನ ಕಾಲದವರೆಗೂ ಭಾರತೀಯ ನಾರಿ ಮುತ್ತೈದೆ ಸಾವನ್ನು ಬಯಸುತ್ತಾಳೆ. ಅದಕ್ಕೆ ಹೊರತಾಗಿಲ್ಲ ರಾಘವಾಂಕ ಚಿತ್ರಿಸಿದ ಚಂದ್ರಮತಿ.

''....... ಭೂಭುಜ ನಿಮ್ಮ ಕೂಡೆ ಸರಿ
ಯೊಳು ಜೀವವಂ ಬಿಡುವುದುಚಿತವಲ್ಲಂ ಬಳಿಕ ಬಿಡುವುದತ್ಯಧರ್ಮತನವು
ಎಳಸಿ ಮುತ್ತೈದೆತನದಲಿ ಮುಂದೆ ಹೋದಪೆಂ
ಕಳುಹಿಸಿಕೊಡಬೇಕು'' ... (ಹ.ಕಾ.ಸ್ಥ.10–21)

ಎಂದು ಚಂದ್ರಮತಿಯ ಬೇಡಿಕೆಯಲ್ಲಿ ಅಂದಿನ ಮುತ್ತೈದೆ ಸಾವಿನ ಕಲ್ಪನೆ ಸ್ಪಷ್ಟವಾಗಿದೆ. ಪತಿಯ ಸಾವಿಗಿಂತ ಪೂರ್ವಭಾವಿಯಾಗಿ ಸಾಯುವುದು ಸತಿಯ ಸೌಭಾಗ್ಯವೆಂದು ಭಾವಿಸಲಾಗಿತ್ತು. ಇದನ್ನು ರಾಘವಾಂಕ ಮುತ್ತೈದೆ ಸಾವೆಂದು ಕರೆದಿರುವನು.

ದೇವರಿಗೆ ಹರಕೆ ಹೊರತಕ್ಕಂತಹ ಪದ್ಧತಿ ಅಂದಿನ ಸಮಾಜದಲ್ಲಿತ್ತೆಂದು ಹರಿಶ್ಚಂದ್ರ ಕಾವ್ಯದಲ್ಲಿ ಬರುತಕ್ಕ ಕೆಳಗಿನ ಪದ್ಯದಿಂದ ತಿಳಿದು ಬರುತ್ತದೆ. ಓರ್ವ ಹಿರಿಯ ವೇಶ್ಯೆಯು ತನ್ನ ಮಗಳಿಗೆ ಬಂದಂತಹ ಕಾಮಜ್ವರದ ತಾಪ ಕಡಿಮೆಯಾಗಲು ಈ ಕೆಳಗಿನಂತೆ ಹರಕೆ ಹೊತ್ತಿದ್ದಾಳೆ.

''.......... ಎನ್ನ ಮಗಳ ಕಾಮಜ್ವರೋ
ಜ್ಜತ ತಾಪವಾರಿದಡೆ ಕಾಮನಂ ನೋನುವೆಂ

ರತಿಯನರ್ಚಿಸುವೆ ಶಶಿಗರ್ಘ್ಯವೆತ್ತುವೆನು ಬೆಳದಿಂಗಳಂ ಬೇಡಿಕೊಂಬೆ
ಲತೆಗೆ ನೀರೆರೆವೆನೆಳಮಾವ ಬಲಗೊಂಬೆನು
ನ್ನುತ ನವಿಲ ಗಿಳಿ ಕೋಗಿಲೆಗೆ ಕುಟುಕನೀವೆನೂ
ರ್ಜಿತ ವಸಂತದೊಳು ಕಾಮಚ್ಛತ್ರವಿಡುವೆನೆಂದಬ್ಬೆ ಹರಸುತ್ತಿರ್ದಳು"
(ಹ.ಕಾ.ಸ್ಥ.4–26)

ಈ ರೀತಿಯಾಗಿ ರಾಘವಾಂಕನು ಹರಿಶ್ಚಂದ್ರ ಕಾವ್ಯದಲ್ಲಿ ಅಂದಿನ ಸಮಾಜದಲ್ಲಿ ಆಚರಣೆಯಲ್ಲಿದ್ದ ಮೂಢ ನಂಬಿಕೆಗಳನ್ನು ಚಿತ್ರಿಸಿದ್ದಾನೆ.

) <u>ಮಹಾಜನರ ಆದರ ಮತ್ತು ಡಂಗುರ ಪದ್ಧತಿ</u>:

ಗುರು ಮುನಿಗಳನ್ನು, ಮಹಾಜನರನ್ನು ಸ್ವಾಗತಿಸುವ ಸಂದರ್ಭದಲ್ಲಿ ಜನರು ಅತ್ಯಂತ ಹೆಚ್ಚಿನ ಉತ್ಸಾಹ ತೋರುತ್ತಿದ್ದರು. ಬೇಟೆಯಾಡಿ ಬರತಕ್ಕ ಹರಿಶ್ಚಂದ್ರ ರಾಜನನ್ನು ಪುರಜನರು ಸ್ವಾಗತಿಸುವ ಸನ್ನಿವೇಶ ಕುತೂಹಲಕಾರಿಯಾಗಿದೆ.

"..... ಪುರದ ಕೇರಿಗಳನೊಪ್ಪ ಸಿಂ
ಗರಿಸಿ ಮನೆಮನೆಗಳೊಳು ಗುಡಿತೋರಣಂಗಳಂ ಸರದೆನೆದು ಸಂಭ್ರಮದಲಿ
ಅಡಕೆ ಹೋಟಾಕೋಟಿ ಕರಿತುರಗ ರಥ ಪತ್ತಿ
ಪರಿಜನಂವೆರಸಿ ಮತ್ತಾ ಹರಿಶ್ಚಂದ್ರ ಭೂ
ವರನನಿದಿರ್ಗೊಳಲು ನಡೆದರು ಶಶಿಯನಿದಿರ್ಗೊಂಡು ಹೆಚ್ಚುವಂಬೋಧಿಯಂತೆ"
(ಹ.ಕಾ.ಸ್ಥ.8–69)

ಪುರದ ಕೇರಿಗಳನ್ನು, ಮನೆಗಳನ್ನು ತಳಿರು–ತೋರಣಗಳಿಂದ ಶೃಂಗರಿಸಿ ನಿಸ್ಸಾಳ ತಂಬಟ, ಹೊನ್ನಾಳೆ, ಮದ್ದಳೆ ಮೊದಲಾದ ವಾದ್ಯಗಳ ಸಂಭ್ರಮದ ಧ್ವನಿಗಳಿಂದ ರಾಜನನ್ನು ಪುರಜನರು ಸ್ವಾಗತಿಸಿದರು.

ಸಮಾಜದಲ್ಲಿ ಗಣ್ಯರೆನಿಸಿಕೊಂಡ ಗುರು, ಮಹಾರಾಜ ಮೊದಲಾದವರನ್ನು ಕಾಣಲು ಹೋಗುವುದು ಗೌರವದ ಕಾರ್ಯವೆಂದು ತಿಳಿಯಲಾಗಿತ್ತು. ಹಾಗೆ ಹೋಗುವಾಗ ಬರಿಗೈಯಿಂದ ಹೋಗದೆ ಅವರವರ ಅಂತಸ್ತಿಗೆ ತಕ್ಕಂತೆ ಕಾಣಿಕೆಗಳನ್ನು ತೆಗೆದುಕೊಂಡು ಹೋಗುವುದು ಅಂದಿನ ಸಮಾಜದಲ್ಲಿಯ ಪದ್ಧತಿಯಾಗಿತ್ತು. ರಾಜಾಜ್ಞೆ ಮೇರೆಗೆ ಬಂದಂಥ ಬೇಡಪಡೆಯು ರಾಜನಿಗೆ ಕಾಣಿಕೆಗಳನ್ನು ಅರ್ಪಿಸಿದ್ದನ್ನು ಬೇಟೆ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ವನವಿಹಾರಿಯಾಗಿ ಬಂದ ಹರಿಶ್ಚಂದ್ರ ರಾಜನನ್ನು ಕಾಣಲು ಬಂದ ಭೂಸುರರು,

"....... ಮಂತ್ರಾಕ್ಷತೆಯನಿತ್ತು ಶಿವಭಕ್ತ
ರಾಸುರದಿ ಭಸಿತಮಂ ಕೊಟ್ಟುಳಿದ ಜನವೆಲ್ಲ
ಲೇಸೆನಿಪ ವಸ್ತುವಂ ಕಾಣಿಕೆಯನಿತ್ತು ......" (ಹ.ಕಾ.ಸ್ಥ. 3–66)

ತಮ್ಮ ಬೇಡಿಕೆಯನ್ನು ನಿವೇದಿಸಿಕೊಂಡರಂತೆ. ಬೇಟೆಯಾಡಿ ಬಂದ ಹರಿಶ್ಚಂದ್ರ ರಾಜನಿಗೆ ಕಾಣಿಕೆಯನ್ನು ಕೊಡಲು ಹೋದಾಗ ಅದನ್ನು ಸ್ವೀಕರಿಸದೆ

"ಎನಗರಸುತನ ಮಾದು ಹೋಗಿ ವಿಶ್ವಾಮಿತ್ರ
ಮುನಿಗಾದುದಾತನಂ ಕಂಡು ಕಾಣಿಕೆಯನಿ
ತ್ತನುದಿನಂ ಬೆಸಕೈವುದು......" (ಹ.ಕಾ.ಸ್ಥ.8-73)

ಎನ್ನುವಲ್ಲಿ, ರಾಜನಾದವನು ಮಾತ್ರ ಪ್ರಜೆಗಳಿಂದ ಕಾಣಿಕೆಯನ್ನು ಸ್ವೀಕರಿಸುವ ಪದ್ಧತಿ ಅಂದಿನ ಸಮಾಜದಲ್ಲಿತ್ತೆಂದು ತಿಳಿದು ಬರುತ್ತದೆ.

ಡಂಗುರ ಸಾರುವ ಪದ್ಧತಿ:

ಇಂದಿನ ಹಾಗೆ ಅಂದು ಪ್ರಸಾರ ಮಾಧ್ಯಮಗಳಿರಲಿಲ್ಲ. ಡಂಗುರ ಸಾರುವ ಮೂಲಕ ವಿಷಯಗಳನ್ನು ತಿಳಿಸುತ್ತಿದ್ದರು. ಅತಿ ಮಹತ್ವದ ಸಂಗತಿಗಳನ್ನು ಜನಸಾಮಾನ್ಯರಿಗೆ ತಿಳಿಯಪಡಿಸಬೇಕಾದ ಸಂದರ್ಭದಲ್ಲಿ ಸೇವಕರ ಮೂಲಕ ಡಂಗುರ ಸಾರಿಸುವುದು ಅಂದಿನ ಸಾಮಾಜಿಕ ಪದ್ಧತಿಯಾಗಿತ್ತು. ಹರಿಶ್ಚಂದ್ರನು ಸುಡುಗಾಡಿನ ನಿಯಮಗಳನ್ನು, ಅದನ್ನು ತಪ್ಪಿದರೆ ಕೊಡತಕ್ಕ ದಂಡನೆಯನ್ನು ಹೇಳುವಲ್ಲಿ ರಾಘವಾಂಕನು ಅಂದು ಸಮಾಜದಲ್ಲಿ ಪ್ರಚಲಿತವಿದ್ದ ಡಂಗುರ ಸಾರುವ ಪದ್ಧತಿಯನ್ನು ಸ್ಪಷ್ಟಪಡಿಸಿದ್ದಾನೆ.

ತೀರ್ಥಕ್ಷೇತ್ರಗಳು:

ಭಾರತೀಯರಿಗೆ ತೀರ್ಥಕ್ಷೇತ್ರಗಳ ಬಗ್ಗೆ ಬಹು ಪೂಜ್ಯನೀಯ ಭಾವನೆಯಿದೆ. ಇವುಗಳ ಬಗ್ಗೆ ಅವರ ಮನಸ್ಸಿನಲ್ಲಿ ವಿಶೇಷವಾದ ಸ್ಥಾನವುಂಟು. "ಪ್ರಾಚೀನ ಕಾಲದಿಂದಲೂ ಭರತಖಂಡದಲ್ಲಿರುವ ಅನೇಕ ನದಿಗಳು, ಪರ್ವತಗಳು, ಅರಣ್ಯಗಳು, ಪ್ರಯಾಗಗಳು, ಜಲಾಶಯಗಳು ವಿವಿಧ ಕಾರಣಗಳಿಂದ ಪವಿತ್ರವೆಂದು ಭಾವಿತವಾಗಿವೆ. ಇಲ್ಲಿಯ ವಿವಿಧ ಭಾಗಗಳಲ್ಲಿ ಅನೇಕ ಋಷಿಗಳು, ಸಾಧು-ಶರಣರು, ಸಂತರು ತಪಗೈದು ಮೋಕ್ಷವನ್ನು ಪಡೆದಿದ್ದಾರೆ. ಅಂಥಾ ಸ್ಥಳಗಳಲ್ಲಿ ಕಾಲಾನುಕಾಲದಲ್ಲಿ ತಮಗೆ ಸಾಕ್ಷಾತ್ಕಾರವಾದ ದೇವತೆಗಳ ಪ್ರತೀಕವಾಗಿ ಮೂರ್ತಿಗಳನ್ನು ಸ್ಥಾಪಿಸಿ ಅವುಗಳಿಗೆ ಆಲಯಗಳನ್ನು ಕಟ್ಟಿಸಿದ್ದಾರೆ. ಭಾರತೀಯರೆಲ್ಲರಿಗೂ ಇವು ಪವಿತ್ರವಾದದ್ದರಿಂದ ಇವುಗಳ ಸ್ತವನ, ಮನನ, ಪ್ರತ್ಯಕ್ಷ ದರ್ಶನಗಳು ಐಹಿಕಾಮುಷ್ಮಿಕ ಫಲಪ್ರದವೆಂದು ಭಾವಿಸಿದ್ದಾರೆ. ಇಂತಹ ಪುಣ್ಯಸ್ಥಳಗಳಿಗೆ ತೀರ್ಥಕ್ಷೇತ್ರಗಳೆಂದು ಹೆಸರುಂಟು". (ಅನಂತರಂಗಾಚಾರ್ಯ: 1984:50) ಇವುಗಳ ವಿಷಯವಾಗಿ ಭಾರತೀಯರ ಮನದಲ್ಲಿ ಬಹು ಪೂಜ್ಯಸ್ಥಾನವುಂಟು. ಋಷಿ ಮನೋಧರ್ಮದ ಭಕ್ತ ಕವಿಯಾದ ರಾಘವಾಂಕನು ಇದಕ್ಕೆ ಹೊರತಾಗಿಲ್ಲ. ಆದರೆ ಭಕ್ತನಾದ ಮಾತ್ರಕ್ಕೆ ಹರಿಹರನಂತೆ ಪುಣ್ಯಕ್ಷೇತ್ರಗಳನ್ನು ದೀರ್ಘವಾಗಿ ವರ್ಣಿಸುವುದಿಲ್ಲ. "ರಾಘವಾಂಕನು ಭಕ್ತಕವಿಯೇ ಆದರೂ ಆತನ ಕಥನ ಕಾವ್ಯದ ಔಚಿತ್ಯಜ್ಞಾನ ಭಕ್ತಿಯನ್ನು ಸ್ವಲ್ಪ ಹಿಂದೆ ಸರಿಸಿ ವರ್ಣನೆಯನ್ನು ತಡೆಹಿಡಿದಿದೆ" ಎಂಬ ಆರ್.ಸಿ. ಹಿರೇಮಠರ(19[illegible]:99)

ಮಾತು ಹರಿಶ್ಚಂದ್ರ ಕಾವ್ಯದಲ್ಲಿ ಬರತಕ್ಕ ಪಂಪಾ-ಕಾಶಿ, ಗಂಗೆ-ತುಂಗೆ ತೀರ್ಥಕ್ಷೇತ್ರಗಳ ವರ್ಣನೆಯನ್ನು ನೋಡಿದಾಗ ನಿಜವೆನಿಸುತ್ತದೆ.

ಪಂಪಾಕ್ಷೇತ್ರ:

ಹಂಪೆಯ ವಿರೂಪಾಕ್ಷನ ಭಕ್ತನಾದ ರಾಘವಾಂಕನು, ತನ್ನ ಜೀವಿತದ ಬಹುಭಾಗವನ್ನು ಹಂಪೆಯ ಪರಿಸರದಲ್ಲಿ ಕಳೆದವನಾದ್ದರಿಂದ ಪಂಪಾಕ್ಷೇತ್ರವನ್ನು ತುಂಗಭದ್ರಾ ನದಿಯನ್ನು ಮನದುಂಬಿ ವರ್ಣಿಸಿದ್ದಾನೆ. ಪಂಪಾ ವಿರೂಪಾಕ್ಷನ ಪ್ರಭಾವಲಯವು ಸುತ್ತಲೂ ವ್ಯಾಪಿಸಿರಲು ಹುಲಿ-ಹುಲ್ಲೆಗಳು, ಹರಿ-ಕರಿಗಳು, ಮುಂಗುಸಿ-ಮೂಷಕಗಳು, ಹಾವು-ನವಿಲುಗಳು ತಮ್ಮ ನಿಜವೈರತ್ವವನ್ನು ಮರೆತು ಜೊತೆಯಲ್ಲಿ ಆಡುತ್ತಿದ್ದವು. ಈ ರೀತಿ ಪಂಪಾ ವಿರೂಪಾಕ್ಷನ ಪ್ರಭಾವ ಆ ವನ್ಯಜೀವಿಗಳ ಮೇಲೆ ಆದದ್ದನ್ನು ತಿಳಿಸಿ ಈ ಕೆಳಗಿನ ಪದ್ಯದಲ್ಲಿ ಆ ಕ್ಷೇತ್ರದ ಮಹತ್ವವನ್ನು ವರ್ಣಿಸುವನು.

"ನೆರೆದ ವೇದಂಗಳುಗ್ಗಡವುಪನಿಷತ್ತುಗಳ
ಗರವಟಿಗೆಯಾಣಿ ಮಾದಿಗಳ ಬೊಬ್ಬೆ ಧರ್ಮದ
ಬ್ಬರ ಧ್ಯಾನಜ್ಞಾನಪ್ರಭಾದೀಪ್ತಿಗಳು ಹರಿಬ್ರಹ್ಮಾದಿ ಸುರರ ಕಾಹು
ಪುರುಷಾರ್ಥ ನಾಲ್ಕರೊಳು ಸಲುಗೆ ಪುಣ್ಯದ ಪುಂಜ
ಸಿರಿ ಸರಸ್ವತಿಯರೆಡೆಯಾಟವೆನೆದಿರೆ ಜಗ
ದ್ಗುರು ವಿರೂಪಾಕ್ಷನಿಲ್ಲಿಯೆ ಸುಖದೊಳಿಪ್ಪ ಪಂಪಾಕ್ಷೇತ್ರವಿದೆಯೆಂದನು"

(ಹ.ಕಾ.ಸ್ಥ.5-8)

ವೇದೋಪನಿಷತ್ತು, ಹರಿಬ್ರಹ್ಮಾದಿ, ಲಕ್ಷ್ಮಿಸರಸ್ವತಿಯರೆಲ್ಲರು ಒಟ್ಟಿಗೆ ಶೋಭಿಸಿರತಕ್ಕಂತಹ, ಇಲ್ಲಿಯೇ ಜಗದ್ಗುರುವಾಗಿರತಕ್ಕ ವಿರೂಪಾಕ್ಷನು ನೆಲಸಿರುವನೆಂದು ತಿಳಿಸುತ್ತ ಇದರ ಸುತ್ತಮುತ್ತ ಇರತಕ್ಕ ಮಹಾತ್ಮರನ್ನು ತಿಳಿಸುವನು. "ತಲೆಯ ಮುಕುಟದ ಅಗ್ರದಲ್ಲಿ ಹೊಳೆಯುವ ರತ್ನಸಮೂಹದಂತೆ, ಭಕ್ತಿ, ಜ್ಞಾನ, ವೈರಾಗ್ಯಗಳನ್ನೊಳಗೊಂಡಿರುವ ಶಿಖರದಂತೆ ಕಾಣುತ್ತದೆ ಹೇಮಕೂಟ. ಇನ್ನು ಮತಂಗಾದ್ರಿ, ಮಾಲ್ಯವಂತಗಳ ಮಹಿಮೆಯನ್ನು ಮದಹರನೆ ಬಲ್ಲನು. ನಾಲ್ಕು ದಿಕ್ಕಿನಲ್ಲಿ ಒಂದೊಂದು ಯೋಜನದಲ್ಲಿರತಕ್ಕ, ಪೂರ್ವದಲ್ಲಿ ಕಿನ್ನರೇಶ, ದಕ್ಷಿಣದಲ್ಲಿ ಜಂಬುಕೇಶ, ಪಶ್ಚಿಮದಲ್ಲಿ ಸೋಮನಾಥ, ಉತ್ತರದಲ್ಲಿ ವಾಣಭದ್ರ — ಹೀಗೆ ನಾಲ್ಕು ಬಾಗಿಲುಗಳಲ್ಲಿ ವಾಸಿಸುತ್ತಿರುವ ಇವರು ಸಾಕ್ಷಾತ್ ಗಣೇಶ್ವರರೆಂದೇ" ವರ್ಣಿಸುವನು.( ಹ.ಕಾ.ಸ್ಥ.5-64, 65) ಹೀಗೆ ರಾಘವಾಂಕನು ಹರಿಶ್ಚಂದ್ರ ಕಾವ್ಯದಲ್ಲಿ ತನ್ನ ಆರಾಧ್ಯ ದೈವವನ್ನು ವರ್ಣಿಸತಕ್ಕ ಸದವಕಾಶ ದೊರೆತಾಗ ಸಹಿತ ಔಚಿತ್ಯ ಮೀರಿ ವರ್ಣಿಸುವುದಿಲ್ಲ. ನಾಲ್ಕು ಪದ್ಯಗಳಲ್ಲಿ ವಿರೂಪಾಕ್ಷನನ್ನು ಕೊಂಡಾಡಿದ್ದಾನೆ.

ತುಂಗಭದ್ರಾ ನದಿ:

ರಾಘವಾಂಕನಿಗೆ ತುಂಗೆ, ಗಂಗೆಗೆ ಸಮಾನ. ಆತನಿಗೆ ಪಂಪಾ ವಿರೂಪಾಕ್ಷನು ಕಾಶಿ ವಿಶ್ವನಾಥನಷ್ಟೆ

ಪೂಜ್ಯನಾದರೆ ತುಂಗೆಯು ಗಂಗೆಯಷ್ಟೆ ಪವಿತ್ರ ಹಾಗು ಮಹತ್ವದ ತೀರ್ಥಕ್ಷೇತ್ರವಾಗಿದೆ. ತುಂಗಭದ್ರೆಯನ್ನು ವರ್ಣಿಸುವಾಗ ವರ್ಣನೆಗಿಂತ ಅದರ ಮಹತ್ವ ನಿರೂಪಣೆಯು ಕಂಡು ಬಂದರೆ ಗಂಗಾನದಿಯ ನಿರೂಪಣೆಯಲ್ಲಿ ಚಿತ್ರವತ್ತಾದ ನಿರೂಪಣೆಯಿದೆ. (ತಿಪ್ಪೇರುದ್ರಸ್ವಾಮಿ:1976:87) ರಾಘವಾಂಕನು ವಶಿಷ್ಠ ವಿಶ್ವಾಮಿತ್ರರನ್ನು ಪರಿಚಯ ಮಾಡಿಕೊಡುವಲ್ಲಿ,

''.....ಉರ್ವಿಯಂ ಪರ್ವಿ ಪಸರಿಸಿದ ನಾನಾ ನದಿಗಳ
ನಡುವೆ ಸುರುಚಿರ ಗಂಗೆ ತುಂಗಭದ್ರೆಗಳೊಪ್ಪ
ವಡೆದು ಮಹಿಮೆಯೊಳೆಸೆವ ತೆರದಿ'' (ಹ.ಕಾ.ಸ್ಥ.2-5)

ಇದ್ದರೆಂದು ಹೇಳುವಲ್ಲಿ ಹಂಪೆಯ ಬಳಿಯ ತುಂಗಭದ್ರೆಯನ್ನು, ಜಗತ್ತಿನ ಶ್ರೇಷ್ಠ ನದಿಗಳಲ್ಲಿ ಒಂದೆಂದು ಹೇಳುವುದರ ಜೊತೆಗೆ, ಅದನ್ನು ಗಂಗಾನದಿಯೊಂದಿಗೆ ಇರಿಸಿ ಗೌರವಿಸುತ್ತಾನೆ'' (ಶಿವರುದ್ರಪ್ಪ :1982:148) ತುಂಗೆಯ ಮಹತ್ವವನ್ನು ಈ ಪದ್ಯದಲ್ಲಿ ಹೇಳುವನು.

''ಬಿಡದೊಮ್ಮೆ ಕಂಡ ಜೀವರ ಭವವ್ರಜದ ಬೆಂ
ಬಡಿಗೆ ಪಾತಕದ ತೋವೆಯ ಕತ್ತಿ ದುಷ್ಕರ್ಮ
ದಡೆಗೊರಳ ಕತ್ತರಿ ಸಮಸ್ತರೋಗಂಗಳೆಡೆಗೊಡ್ಡಿದಲಗ ಜ್ಞಾನದ
ನಡುದಲೆಯ ಗರಗಸಂ ಮಲೆವ ಮಾಯೆಯ ಬಸುರ
ನೊಡೆಹೊಯ್ವ ಶೂಲವಿನ್ನುಳಿದ ದುರಿತವನುರುಹಿ
ಸುಡುವ ಕಿಚ್ಚೆಂದೆನಿಪ ತುಂಗಭದ್ರಾನದಿಯನವನೀಶ ನೋಡೆಂದನು''
(ಹ.ಕಾ.ಸ್ಥ.5-64)

ಪಾಪವನ್ನು ಹೋಗಲಾಡಿಸುವ ತುಂಗಭದ್ರೆಯ ಶಕ್ತಿಯನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾನೆ. 'ಗಂಗಾ ಸ್ನಾನಂ ತುಂಗಾ ಪಾನಂ' ಎಂಬಂತೆ ತುಂಗಾ ಪಾನದಿಂದ ಎಲ್ಲಾ ಪಾಪಗಳು ಯಾವ ರೀತಿ ಹೋಗಲ್ಪಡುತ್ತವೆಂದು ಹೇಳಿದ್ದಾನೆ.

ಪವಿತ್ರ ಸ್ಥಳದಲ್ಲಿರತಕ್ಕ ಕಲ್ಲು, ಗಿಡ, ನೀರಿನ ಹೊಂಡ ಕೂಡ ಪವಿತ್ರವಾಗಿ ಕಾಣುತ್ತವೆ — ಕವಿಯ ಕಣ್ಣಿಗೆ. ಅಂತೆಯೆ ಹಂಪೆಯಲ್ಲಿರತಕ್ಕ ಮನ್ಮಥ ಸರೋವರದ ಮಹತ್ವವನ್ನು ಕೊಂಡಾಡುವನು. ''ಹರ, ಬ್ರಹ್ಮ, ಇಂದ್ರಾದಿ ದಿಕ್ಪಾಲಕರು ತಪಗೈಯ್ವಂಥ ತಪೋಭೂಮಿ, ಪ್ರಸಿದ್ಧ ಲಿಂಗ, ಸರೋವರಗಳು, ಗಂಗಾನದಿಯೂ ಬಂದು ನೆಲಸಿದ ಈ ಸ್ಥಳವೇ ಪಾತಾಳಗಂಗೆ, ದೇವತೆ, ಮುನಿಗಳು, ಪಂಚಭೂತಗಳು, ಖರಕರ, ಹಿಮಕರ, ಇವರೊಡನೆ ಕೂಡಿ ಮನ್ಮಥನನ್ನು ಹರನು ಉರುಹಿದ ಸ್ಥಳವೇ ಈ ಮನ್ಮಥ ಸರೋವರ ಎಂದು ಹೇಳಿ ಅದಕ್ಕೆ ಐತಿಹಾಸಿಕ ಹಿನ್ನೆಲೆ ಒದಗಿಸುವನು. ಹನ್ನೊಂದು ತೀರ್ಥವು ಈ ಮನ್ಮಥ ಸರೋವರದಲ್ಲಿದೆ. ಕಾಶಿಯಲ್ಲಿ ಮಣಿಕರ್ಣಿಯಲ್ಲಿ ಸ್ನಾನ ಮಾಡಿದವರಿಗಿಂತ ಇಲ್ಲಿ ಸ್ನಾನ ಮಾಡಿದವರು ಧನ್ಯರಾಗುವರು. ಇಲ್ಲಿಯ ರುದ್ರನ ಪಾದ ಸನ್ನಿಧಿಯು ಗಯೆಗಿಂತಲೂ ಅಧಿಕವೆಂದು'' (ಹ.ಕಾ.ಸ್ಥ.5-76, 77) ಮನ್ಮಥ ಸರೋವರದ ಮಹತಿಯನ್ನು ಬಣ್ಣಿಸುವನು.

ಪುರಾಣದಲ್ಲಿ ಬರತಕ್ಕ ಮಹಿಷಾಸುರ ಮರ್ದಿನಿಯಾದ ಪಾರ್ವತಿಯೇ ಪಂಪಾಂಬಿಕೆಯೆಂಬ ಅಭಿದಾನದಿಂದ ಹಂಪೆಯಲ್ಲಿ ನೆಲೆನಿಂತಳು. ಕಾಶಿಯಲ್ಲಿ ವಿಶಾಲಾಕ್ಷಿಯೆಂದು, ಕಂಚಿಯಲ್ಲಿ ಕಾಮಾಕ್ಷಿಯೆಂಬ ಹೆಸರನ್ನು ಹೊಂದಿದ್ದು ಹಂಪೆಯಲ್ಲಿ ಅಂಬಿಕೆಯಾಗಿರುವಳೆಂದು ಹೇಳುವನು.

(ಹ.ಕಾ.ಸ್ಥ.5–78)

<u>ಕಾಶಿಕ್ಷೇತ್ರ</u>:

"ಸುಮಾರು 300 ವರ್ಷಗಳಿಂದ ಪ್ರಸಿದ್ಧವಾಗಿರುವ ವಾರಣಾಸಿ ಹಿಂದುಗಳಿಗೆ ಪರಮಪವಿತ್ರವಾದ ಸ್ಥಳ. ಈ ಪಟ್ಟಣವು 'ವರುಣಾ' ಮತ್ತು 'ಅಸಿ' ಎಂಬ ನದಿಗಳ ಮಧ್ಯದಲ್ಲಿರುವುದರಿಂದ ವಾರಣಾಸಿ ಎಂಬ ಹೆಸರು ಪಡೆದಿದೆ. ಮೋಕ್ಷದಾಯಕಗಳೆಂದು ಪ್ರಸಿದ್ಧವಾದ 7 ಭಾರತೀಯ ಕ್ಷೇತ್ರಗಳಲ್ಲಿ ಇದೂ ಒಂದು. ಈ ಕ್ಷೇತ್ರ ಗಂಗಾತೀರದಲ್ಲಿದೆ. ತೀರ್ಥಸ್ಥಲೀ, ಕಾಶಿಕಾ, ಅವಿಮುಕ್ತ, ಆನಂದವನ, ಅಪುನರ್ಭವ ಭೂಮಿ, ರುದ್ರವಾಸ, ಮಹಾಸ್ಮಶಾನ ಎಂಬ ಹೆಸರುಗಳುಂಟು. ವಾರಣಾಸಿ ಮತ್ತು ಕಾಶಿ ಎಂಬುದು ಈಗಿನ ಅಧಿಕೃತ ಹೆಸರು. (ಅನಂತರಂಗಾಚಾರ್ :1984 :305)

ಇಂತಹ ಕಾಶಿಕ್ಷೇತ್ರ ಹಾಗು ಅಲ್ಲಿರತಕ್ಕ ಇತರ ಪವಿತ್ರ ಕ್ಷೇತ್ರಗಳನ್ನು ಹರಿಶ್ಚಂದ್ರಕಾವ್ಯದಲ್ಲಿ ರಾಘವಾಂಕ ವರ್ಣಿಸಿರುವನು.

"ದುರಿತವಿಘಟನ ತೇಜದಿಂ ಸೂರ್ಯವೀಥಿಗಳು
ವರಕೀರ್ತಿ ಬೆಳದಿಂಗಳಿಂ ಸೋಮವೀಥಿಗಳು
ತರವಿಡಿದು ಸಾಲ್ವಿಡಿದು ಸರಿಸವಿಡಿದೋರಣಂಬಿಡಿದು ಪರಿಪಂತಿವಿಡಿದು
ಭರಿತ ಹೊಂಗಳಸಂಗಳಿಂ ಸುಧಾಧೌತ್ರಿಗಳ
ಪರಿವಿಡಿಗಳಿಂದ ಭಯ ವೀಥಿಗಳು ಮೇರೆದಪ್ಪೀ
ಶ್ವರ ವಿಶ್ವಪತಿಯ ನಿಳಯದ ವಳಯಮಂ ಬಳಸಿ ತಳತಳಿಸಿ ಹೊಳೆಹೊಳೆವುತ"

(ಹ.ಕಾ.ಸ್ಥ.10–34)

ಎನ್ನುವಲ್ಲಿ ರಾಘವಾಂಕನು ಕಾಶಿ ವಿಶ್ವನಾಥ ದೇವಾಲಯದ ಆವರಣವು ಪಾಪವನ್ನು ಹೋಗಲಾಡಿಸಿ ಕೀರ್ತಿಯನ್ನು ಕೊಡತಕ್ಕದ್ದು, ಶಿಸ್ತಿನಿಂದ ಕೂಡಿದ್ದು ಹಾಗು ಅತ್ಯಂತ ವೈಭವಯುತವಾಗಿ ಮೆರೆಯುತ್ತಿತ್ತೆಂದು ಹೇಳುವನು. ಎಲ್ಲಾ ಪುಣ್ಯಕ್ಷೇತ್ರಗಳಂತೆ ಕಾಶೀಕ್ಷೇತ್ರವಿರದೆ ಅದಕ್ಕೆ ತನ್ನದೇ ಆದ ವಿಶಿಷ್ಟತೆಯುಂಟು. ಇಲ್ಲಿ ಸುಖವೂ ಉಂಟು; ಪುಣ್ಯವೂ ಉಂಟು. ಇಲ್ಲಿ ಕುಡಿಯುವ ನೀರು ಪನ್ನೀರಾದರೆ ಸೇವಿಸುವ ಪ್ರಸಾದ ಅಮೃತ. ಜನದ ಇಹಕ್ಕೂ ಪರಕ್ಕೂ ಸೊಗಸು ಈ ಕಾಶಿಕ್ಷೇತ್ರ.

(ಹ.ಕಾ.ಸ್ಥ.10–35)

ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಈ ಕ್ಷೇತ್ರಕ್ಕೆ ಎಂತಹ ಮಹತ್ವದ ಸ್ಥಾನವಿದೆ ಎಂದು ಈ ಪದ್ಯದಲ್ಲಿ ಹೇಳುವನು.

''ಕಾಮದಾಮರ ಕಾಲಕೀಲ ಕರ್ಮಾರ್ಧಮರ್ಮ
ವಾಮಯ ಸ್ತೋಮ ಧೂಂಯೋಪಾಯ ಪಾಪ ತಾ
ಪಾಮೋದ ಮದನನ ಮದಂ ಭ್ರಾತೃವ್ಯಾತಿಹುಗಲಾರವಿಂತೀಗಳೆಂಬ
ಸಾಮರ್ಥ್ಯಮಂ ಹೇರಿ ಮೀರಿ ರುದ್ರಂಗೆ ವಿ
ಶ್ರಾಮಸ್ಥಲಾವಾಸವೆನಿಸಿ ರಾಜಿಸುವ ನಾ
ನಾ ಮಹಿಮೆಯಿಂದೆಸೆವ ಕಾಶಿಯ ವಿಶೇಷಮಂ......'' (ಹ.ಕಾ.ಸ್ಥ.10-36)

ಅರಿಷಡ್ವರ್ಗಗಳಿಂದ ದೂರವಾದ ಕಾಶಿಕ್ಷೇತ್ರ ರುದ್ರನ ವಿಶ್ರಾಮ ತಾಣದಂತೆ ಧರೆಯ ಮೇಲೆ ವಿರಾಜಿಸುತ್ತಿತ್ತು. ಇಂಥ ವಿಶ್ವನಾಥನ ನಿಲಯದ ಕಳಸವು ಮುಕ್ತಿ ಎಂಬ ಅಂಗನೆಯ ತಲೆಯ ರತ್ನ ಖಚಿತ ಕಿರೀಟದಂತೆ ಕಾಣುತ್ತಿತ್ತು. ವಿಶ್ವನಾಥ ನಿಲಯದಲ್ಲಿರುವ ಬದಂನಿಂದ ಮಾಡಿದ ಧ್ವಜವ್ಯಾಸ ಹಸ್ತವು ಪಾತಕಿಗಳಿಗೆ ಅಭಯವನ್ನು, ಪುಣ್ಯಪದವಿಗಳನ್ನು ಬಯಸಿ ಬಂದವರಿಗೆ ಕೊಡುಗೈ ದೊರೆಯಾಗಿತ್ತು. ರಾಘವಾಂಕನು ಕಾಶಿ ವಿಶ್ವನಾಥನನ್ನು ವರ್ಣಿಸುವುದರ ಜೊತೆಯಲ್ಲಿಯೆ ಕಾಮೇಶ, ವಿಭಾಂಡೇಶ, ದಕ್ಷೇಶ್ವರರ ಚರಿತ್ರೆಯನ್ನು ವಿವರವಾಗಿ ಪರಿಚಯಿಸಿರುವನು. (ಹ.ಕಾ.ಸ್ಥ.10-42, 43, 44).

<u>ಗಂಗಾನದಿ</u>:

ಗಂಗಾನದಿಗೆ ಹಿಂದೂಗಳಲ್ಲಿ ಬಹು ಪವಿತ್ರವಾದ ಸ್ಥಾನವುಂಟು. ಸಾಯುವ ವೇಳೆಯಲ್ಲಿ ಗಂಗಾಜಲವನ್ನು ಬಾಯಲ್ಲಿ ಹಾಕತಕ್ಕ ಆಚರಣೆ ಇಂದೂ ಕೂಡ ಬಳಕೆಯಲ್ಲಿದೆ. ಗಂಗೆಯಲ್ಲಿ ಸ್ನಾನ ಮಾಡಿದರೆ ಪಾಪವೆಲ್ಲ ಪರಿಹಾರವಾಗುತ್ತದೆಂಬ ನಂಬಿಕೆ ಈಗಲೂ ಜನತೆಯ ಮನದಲ್ಲಿದೆ. ಜನರ ಪ್ರತಿನಿಧಿಯಾದ ಕವಿ ರಾಘವಾಂಕನು ತನ್ನ ಕಾವ್ಯದಲ್ಲಿ ಅದನ್ನು ವ್ಯಕ್ತಪಡಿಸಿದ್ದಾನೆ.

''........ ಶತ
ಕಲಿಮಲಕುಲಾಪಕರ್ಷಣೆಯಾನು ವಿಪುಳಪಾತಕ ಕೋಟಿಯೆಂಬ
ಜಲಜವನ ಚಂದ್ರಕಳೆಯನು ಭವಭಯಂಕುಧರ
ಕುಲಿಶಾಭಿಧಾನೆಯಾನೆಂದು ಧರೆಗರುಪಲೆಂ
ದುಲಿವಂತೆ ಘುಳುಘುಳುಧ್ವಾನದಿಂದೆಸೆವ ಗಂಗಾನದಿ ವಿರಾಜಿಸಿದಳು''
(ಹ.ಕಾ.ಸ್ಥ.10-23)

ಒಂದಲ್ಲ ಎರಡಲ್ಲ, ನೂರು ಕಲಿಯುಗದ ಕಲ್ಮಶ ಸಮೂಹವನ್ನು ನಾಶಮಾಡತಕ್ಕವಳು ತಾನೆಂದು, ವಿಪುಲವಾಗಿರತಕ್ಕ ಪಾತಕ ಕೋಟಿಯೆಂಬ ಕಮಲವನಕ್ಕೆ ಚಂದ್ರಕಳೆಯಂತೆ ಅಂದರೆ ಕಮಲಕ್ಕೆ ಬೆಳದಿಂಗಳು ಹೇಗೆ ಹಿಡಿಸುವುದಿಲ್ಲವೋ ಹಾಗೆ ಪಾತಕ ಕಾರ್ಯಗಳು ಹಿಡಿಸುವುದಿಲ್ಲ. ಆದ್ದರಿಂದ ಅವದನ್ನು ಹೋಗಲಾಡಿಸುವವಳು ತಾನೆಂದು, ಹುಟ್ಟು ಸಾವುಗಳ ಪರ್ವತಕ್ಕೆ ವಜ್ರಾಯುಧವೆಂಬ ಹೆಸರನ್ನು ಪಡೆದಂಥ ಅಂದರೆ ಹುಟ್ಟುಸಾವುಗಳ ಭಯವನ್ನು ಹೋಗಲಾಡಿಸಿ ಜೀವನ್ಮುಕ್ತ ಸ್ಥಿತಿಯನ್ನು ಕೊಡತಕ್ಕವಳು ತಾನೆಂದು ಧರೆಗೆ ತಿಳುಹಲೆಂದು ಘುಳು ಘುಳು ಶಬ್ದ ಮಾಡುತ್ತ ಗಂಗಾನದಿ ವಿರಾಜಿಸುವಳೆಂದು

ಗಂಗೆಯ ಸಹಜ ಕ್ರಿಯೆಯಾದ ಚಲನಶೀಲತೆಯನ್ನು ಬಹು ಮಾರ್ಮಿಕವಾಗಿ ರಾಘವಾಂಕನು ತಿಳಿಸಿದ್ದಾನೆ. ಅವರವರ ಭಕ್ತಿ ಅವರವರ ತೆರನಾಗಿರುತ್ತಿಹನು ಶಿವಯೋಗಿ ಎನ್ನುವಂತೆ ಗಂಗೆಯನ್ನು ನಾವು ಯಾವ ರೀತಿಯಲ್ಲಿ ಪೂಜಿಸುವೆವೋ ಅಂಥಾ ರೀತಿಯಲ್ಲಿ ಅವಳು ಒಲಿಯುವಳೆಂದು ಬಹು ಸುಂದರವಾಗಿ ಈ ಪದ್ಯದಲ್ಲಿ ವರ್ಣಿಸಿದ್ದಾನೆ.

"....... ಕೇಳ್ದಡಘಹರಂ ನೆನೆಯೆ ಪುಣ್ಯಪ್ರದ ನುಡಿ
ದಡೆ ಸರ್ವಸಿದ್ಧಿ ಕಂಡಡೆ ಜನ್ಮನಾಶ ಪೊಗ
ಳ್ವಡೆ ಸುರೇಂದ್ರತ್ವ ಸೋಂಕಿದಡೆ ಕಮಲಜಪದವಿ ಮರೆದೊಮ್ಮೆ ಕುಡಿತಗೊಂಡು
ಕುಡಿದೆನಾದಡೆ ಮುಕ್ತಿಯವಗಾಹವಿರ್ದನಾ
ದಡೆ ಗಣೇಶತ್ವ ಸಾರ್ದಡೆ ಮಹಾರುದ್ರತ್ವ
ವಡೆವರೀ ಗಂಗೆಯಿಂದಾರಾದಡೆಂಬ ಮಹಿಮೆಗೆ ಸಾಕ್ಷಿ ವೇದಮತವು" (ಹ.ಕಾ.ಸ್ಥ 10–3

ಗಂಗೆಯ ಹೆಸರನ್ನು ಕೇಳಿದರೆ ಪಾಪನಾಶ, ಅವಳನ್ನು ನೆನೆದರೆ ಪುಣ್ಯ. ಅವಳ ಹೆಸರನ್ನು ಕೇಳಿದರ ಸರ್ವಸಿದ್ಧಿ ನೋಡಿದರೆ ಜನ್ಮನಾಶ. ಹೊಗಳಿದರೆ ಇಂದ್ರಪದವಿ, ಸ್ಪರ್ಶ ಮಾಡಿದರೆ ಬ್ರಹ್ಮ ಪದವಿ. ಒಂದು ಸಲ ಗಂಗೆಯನ್ನು ಕುಡಿದರೆ ಮುಕ್ತಿ. ಇದರಲ್ಲಿ ಸ್ನಾನ ಮಾಡಿದರೆ ಗಣೇಶತ್ವ. ಇವನ್ನು ಸೇರಿದರೆ ಮಹಾರುದ್ರತ್ವ ಸಾರುವದೆಂದು ಹಂತಹಂತವಾಗಿ ಗಂಗೆಯ ವ್ಯಕ್ತಿತ್ವ ಉನ್ನತ ಮಟ್ಟಕ್ಕೆ ಹೋಗುವುದರ ಜೊತೆಯಲ್ಲಿ ಅವಳ ಒಡನಾಟದಿಂದ, ಅವಳ ಸ್ಪರ್ಶದಿಂದ ಮಾನವನು ಮಹಾದೇವನಾಗುವನೆಂದು, ರಾಘವಾಂಕನು ಗಂಗೆಯನ್ನು ವರ್ಣಿಸುವನು. ಕವಿಗೆ ಗಂಗೆಯನ್ನು ಎಷ್ಟು ವರ್ಣಿಸಿದರೂ ಸಾಲದು. 'ಅವಳು ಅತಿ ಅಧೋಗಮನೆಯಾಗಿಯೂ ತನ್ನನ್ನು ಮುಟ್ಟಿದವರನ್ನು, ಉನ್ನತಿಯ ಏಳಿಗೆಯ ಕಡೆಗೆ ಗಮನವುಳ್ಳವರನ್ನಾಗಿ ಮಾಡುವಳು. ಯಾವಾಗಲೂ ಪ್ರತಿಕೂಲೆ ಎನ್ನಿಸಿಯೂ ಸವಿದವರಿಗೆ ಪುಣ್ಯಾನುಕೂಲೆಯಾಗಿರುವಳು. (ಹ.ಕಾ.ಸ್ಥ.10–31)

ಈ ರೀತಿಯಾಗಿ ರಾಘವಾಂಕನು ಹರಿಶ್ಚಂದ್ರ ಕಾವ್ಯದಲ್ಲಿ ಹಂಪೆ ಹಾಗು ಕಾಶಿಕ್ಷೇತ್ರಗಳನ್ನು ಗಂಗಾ ಹಾಗೂ ತುಂಗಾ ತೀರ್ಥಕ್ಷೇತ್ರಗಳನ್ನು ವರ್ಣಿಸುವನು. "ರಾಘವಾಂಕನಿಗೆ ಹಂಪೆಯನ್ನು ಕುರಿತು ವಿಶೇಷವಾದ ಅಭಿಮಾನ— ಪಂಪನಿಗೆ ಬನವಾಸಿ ಮೇಲೆ ಹೇಗೋ ಹಾಗೆ. ಹಂಪೆ ರಾಘವಾಂಕನ ಆಡುಂಬೊಲ. ಅಲ್ಲಿ ಹರಿಯುವ ತುಂಗಭದ್ರೆ ಅದರ ತಡಿಯ ವಿರೂಪಾಕ್ಷನ ದೇಗುಲ, ರಾಘವಾಂಕನ ಭಕ್ತಿಗೌರವದ ನೆಲೆಗಳು. 'ಮಂಗಳದ ನಿಳಯ ಮುಕ್ತಿಯ ಮೂಲವೆನಿಸುವವು ಕಾಶಿ ಹಂಪೆಗಳು. ಅವಕೆ ವಿಶ್ವೇಶ್ವರ ವಿರೂಪಾಕ್ಷರೇ ಒಡೆಯರು,' (8–60) ತಾನು ಹುಟ್ಟಿ ಬೆಳೆದ ಹಂಪೆಯ ಬಗ್ಗೆ ರಾಘವಾಂಕನಿಗೆ ಇಷ್ಟೊಂದು ಅಭಿಮಾನ. ಹಂಪೆ ಕಾಶಿಗೆ ಸಮ, ತುಂಗಭದ್ರೆ ಗಂಗೆಗೆ ಸಮ, ವಿರೂಪಾಕ್ಷ ವಿಶ್ವೇಶ್ವರನಿಗೆ ಸಮ. ಅಯೋಧ್ಯೆಯಲ್ಲಿ ನಡೆದ ಹರಿಶ್ಚಂದ್ರ ಕಾವ್ಯದ ಘಟನಾ ಪರಂಪರೆಗಳನ್ನು ತಂದು ಹಂಪೆಗೂ ಗಂಟುಹಾಕಿದುದು ರಾಘವಾಂಕನಿಗೆ ಹಂಪೆಯ ಮೇಲೆ ಇದ್ದ ಪ್ರೀತಿ ಎಷ್ಟೆಂಬುದು ತೋರುತ್ತದೆ."(ಶಿವರುದ್ರಪ್ಪ:1982:148 ಮತ್ತು 149) ಆದರೆ ಈತನ ವರ್ಣನೆಯಲ್ಲಿ ಎಲ್ಲಿಯೂ ಹರಿಹರನಂತೆ ಆವೇಶಕ್ಕೆ ಎಡೆಯಿಲ್ಲ. ಸಮಚಿತ್ತವನ್ನು ಇಟ್ಟುಕೊಂಡು ಎಲ್ಲಿಯೂ ಸಮತೋಲನ ತಪ್ಪದಂತೆ ವರ್ಣಿಸಿದ್ದಾನೆ.

) ವೇಶ್ಯಾವಾಟಿಕೆ-ವೇಶ್ಯೆಯರು:

ಕವಿಗಳು ತಮ್ಮ ಕಾವ್ಯ, ಮಹಾಕಾವ್ಯದ ಪಟ್ಟಕ್ಕೇರಬೇಕೆಂಬ ಹಂಬಲದಿಂದ ಅಷ್ಟಾದಶ ವರ್ಣನೆಗಳನ್ನು ತಮ್ಮ ಕಾವ್ಯದಲ್ಲಿ ಅಳವಡಿಸುತ್ತಿದ್ದರು. ಆ ದಿಶೆಯಲ್ಲಿ ರಾಘವಾಂಕನು ಹರಿಶ್ಚಂದ್ರ ಕಾವ್ಯದಲ್ಲಿ ಅಷ್ಟಾದಶ ವರ್ಣನೆಗಳಲ್ಲಿ ಒಂದಾದ ವೇಶ್ಯಾವಾಟಿಕೆಯನ್ನು ವರ್ಣಿಸಿದ್ದಾನೆ. ‘‘ವೇಶ್ಯಾವಾಟಿಕೆಯ ವರ್ಣನೆಗಳಿಗಾಗಿ ರಾಘವಾಂಕನನ್ನು ದೂಷಿಸುವುದರಲ್ಲಿ ಅರ್ಥವಿಲ್ಲ. ಅಂದಿನ ಕಾವ್ಯ ಸಂಪ್ರದಾಯ, ಸರ್ವಜನ ಗ್ರಾಹ್ಯವಾದ ಕಾವ್ಯಲಕ್ಷಣಗಳು, ರಾತ್ರಿಯ ವರ್ಣನೆಯನ್ನು, ಅದರ ಒಂದು ಅಂಗವಾಗಿ ವೇಶ್ಯಾವಾಟಿಕೆಯನ್ನು ಕಡ್ಡಾಯವಾಗಿ ಮಾಡಿದ್ದುವು. ಆಧುನಿಕ ದೃಷ್ಟಿಯಲ್ಲಿ ಅನುಚಿತವಾಗಿ ಕಾಣುವ ಈ ಪ್ರಸಂಗ ಕಾವ್ಯ ಲಕ್ಷಣದ ಒಂದು ಬಹುಮುಖ್ಯವಾದ ಅಂಗವಾಗಿತ್ತು.’’ (ಸೂರ್ಯನಾರಾಯಣ:1988:99) ‘‘ವನಕ್ರೀಡೆಗೆ ಹೋಗಿದ್ದ ಹರಿಶ್ಚಂದ್ರರಾಜನು ವಿಶ್ವಾಮಿತ್ರನ ಆಶ್ರಮಕ್ಕೆ ಬೇಟೆಯಾಡುತ್ತ ಬಂದನೆಂದು ಹೇಳಿದ್ದರೆ ಕಾವ್ಯಕ್ಕೆ ಕುಂದೇನು ಆಗುತ್ತಿರಲಿಲ್ಲ. ಅದರೆ ಆಯಾ ಕಾಲಕ್ಕೆ ಉಚಿತವಾದ ಕಾರ್ಯಗಳನ್ನು ಮಾಡುತ್ತಿದ್ದನೆಂಬುದನ್ನು ನಿರೂಪಿಸಲಿಕ್ಕಾಗಿಯೇ ಇವೆರಡು ಸಂಗತಿಗಳನ್ನು ಹೇಳಲೆ ಮುಂದೆ ಬರತಕ್ಕ ಕರುಣರಸಕ್ಕೆ ಈ ತೆರದ ಶೃಂಗಾರದ ಹಿನ್ನೆಲೆ ಕಾವ್ಯೋಚಿತವಾಗಿದ್ದು ಕವಿಸಮಯಾನುಸಾರಿಯಾಗಿದೆ’’. (ವೆಂಕಟರಾಮಾಚಾರ್ಯ:1957:69)

ರಾಘವಾಂಕನು ಕಥಾನಾಯಕನಾದ ಹರಿಶ್ಚಂದ್ರನನ್ನು ಸೂಳೆಗೇರಿಯಲ್ಲಿ ಒಂದು ರಾತ್ರಿ ತಿರುಗಾಡಿಸಿದ್ದಾನೆ ಹೊರತು, ಆತನು ಭೋಗವಿಲಾಸದಲ್ಲಿ ಮಗ್ನನಾಗಿದ್ದನೆಂದು ಎಲ್ಲಿಯೂ ಚಿತ್ರಿಸಿಲ್ಲ. ಕವಿಗಳು ಸಮಾಜದಲ್ಲಿದ್ದುದನ್ನು ಬರವಣಿಗೆಯಲ್ಲಿ ಸೆರೆಹಿಡಿಯುತ್ತಾರೆ. ಆದ್ದರಿಂದಲೇ ಸಾಹಿತ್ಯವನ್ನು ಸಮಾಜದ ಪ್ರತಿಬಿಂಬವೆಂದು ಕರೆಯಲಾಗಿದೆ. ರಾಘವಾಂಕನು ಹರಿಶ್ಚಂದ್ರಕಾವ್ಯದಲ್ಲಿ ವೇಶ್ಯಾವಾಟಿಕೆಯ ವರ್ಣನೆಯನ್ನು ಸಂಪ್ರದಾಯಶರಣನಾಗಿ ಮಾಡಿದರೂ ಕೂಡ, ಅಂದಿನ ಅವರ ಬದುಕಿನ ವಾಸ್ತವ ಚಿತ್ರಣವನ್ನು ಕೊಟ್ಟಿದ್ದಾನೆ. ಅವರ ವೇಷ-ಭೂಷಣ, ಹವ್ಯಾಸ, ಕಲಾಭಿರುಚಿ ಹಾಗು ಅವರ ಬದುಕಿನ ರೀತಿ-ನೀತಿಗಳನ್ನು ಚಿತ್ರಿಸುವುದರ ಮೂಲಕ ಅಂದಿನ ಸಮಾಜದಲ್ಲಿಯ ವೇಶ್ಯೆಯರ ಬದುಕಿನ ಮೇಲೆ ಕ್ಷ-ಕಿರಣ ಬೀರಿದ್ದಾನೆ.

‘‘........ ಜಾಣಿನ ಜನ್ಮಭೂಮಿ ಸಿಂ
ಗರದ ಮಡು ಮೋಹನದ ಬೀಡು ಸೊಬಗಿನ’ ಸೀಮೆ ವಿತತಚದುರಿನ ಚಾವಡಿ
ಪುರುಡಿನೆಡೆಯುಪಚಾರದಿಕ್ಕೆ ವ್ಯಸನದ ಹರ
ವರಿ ಹುಸಿಯ ಹಸರ ಕೃತಕದ ಕೇರಿಯರ್ಥದಾ
ಗರ ವಳುಪಿನಾವಾಸವೆಂದೆನಿಪ ಸೂಳೆಗೇರಿ.......’’ (ಹ.ಕಾ.4-4)

ಎಂದು ಸೂಳೆಗೇರಿಯನ್ನು ವರ್ಣಿಸುವುದರ ಜೊತೆಯಲ್ಲಿ ಅವರ ಬದುಕನ್ನು ರಾಘವಾಂಕನು ವಿಡಂಬನಾತ್ಮಕವಾಗಿ ವರ್ಣಿಸಿದ್ದಾನೆ. ಸೊಬಗಿನ ಸೀಮೆಯಾಗಿರತಕ್ಕ, ಮೋಹಕತೆಯ ಬೀಡಾಗಿರತಕ್ಕ ಆ

ಸೂಳೆಗೇರಿಯಲ್ಲಿ ವೇಶ್ಯೆಯರು ಅತ್ಯಂತ ವೈಭವವಾದ ಬದುಕನ್ನು ಬದುಕುತ್ತಿದ್ದರು. ವಿಸ್ತಾರವಾದ ಸುಂದರವಾದ ಮಂಟಪಗಳುಳ್ಳ, ಎತ್ತರವಾದ ಉಪ್ಪರಿಗೆಯ ಮನೆಗಳಲ್ಲಿ ವಾಸಿಸುತ್ತಿದ್ದರು. ಅವರ ಮನೆಗಳ ಅಡಿಗಲ್ಲು ಸ್ಫಟಿಕದಿಂದ, ಗೋಡೆಯು ಚಂದ್ರಕಾಂತ ಶಿಲೆಯಿಂದ, ಕಂಬಗಳು ವಜ್ರದಿಂದ ತೊಲೆಗಳು ಹವಳದಿಂದ, ಕಳಸಗಳು ಮಾಣಿಕದಿಂದ ಮಾಡಲ್ಪಟ್ಟು ಕುಬೇರನ ಅಳಕಾಪುರಿಯನ್ನು ತಿರಸ್ಕರಿಸುವಂತೆ ಇದ್ದವು. (ಹ.ಕಾ.ಸ್ಥ.4-6) ಇಂಥ ವೈಭವದ ಮನೆಯಲ್ಲಿರತಕ್ಕ ವೇಶ್ಯೆಯರು ಅತ್ಯಂತ ಸುಂದರಿಯರಾಗಿದ್ದರು.

“ತುಂಗಕುಚ ಕಲಶಯುಗಳಂಗಳ ಕುರಂಗ ನಯ
ನಂಗಳಿಭಕುಂಭ ಜಘನಂಗಳ ಮರಾಳ ಗಮ
ನಂಗಳ ಸುಧಾಂಗನಿಂ ಪೊಂಗುವೆಳದಿಂಗಳ ತೊಡರ್ದ ಕಂಗಳ ಬೆಳಗಿನ
ಳಂಗಿಸುವ ಮಧುರವಚನಂಗಳರುಣ ಪ್ರವಾ
ಳಂಗಳ ನಖಂಗಳ ಲತಾಂಗಿಯರೆನಿಪ್ಪ ಪುಣ್ಯಾಂಗನಾಜನವೆಸೆದುದು”
(ಹ.ಕಾ. 4-40)

“ಜೋಡಿ ಕಳಸದಂತೆ ಉತ್ತುಂಗ ಕುಚಗಳನ್ನುಳ ಜಿಂಕೆಯ ಕಣ್ಣನಂತೆ ಕಣ್ಣುಗಳನ್ನುಳ್ಳ, ಆನೆಯ ಕುಂಭದಂತೆ ನಿತಂಬಗಳನ್ನುಳ್ಳ, ಹಂಸದಂತೆ ನಡಿಗೆಯನ್ನುಳ್ಳ, ಚಂದ್ರನಿಂದ ಹೊಮ್ಮಿದ ಬೆಳದಿಂಗಳನ್ನು ಧರಿಸಿದಂತೆ ಕಣ್ಣುಗಳ ಬೆಳಕನ್ನುಳ್ಳ ದುಂಬಿಯ ಸಮೂಹದಂತೆ ನೀಳವಾದ ಮುಂಗುರುಳನ್ನುಳ್ಳ, ಆಕಾಶವನ್ನೆ ಬೆಳಗಿಸುವಂತಹ ಮಧುರ ಮಾತುಗಳನ್ನಾಡುವ ಕೆಂಪು, ಹವಳದಂತೆ ಉಗುರುಗಳನ್ನುಳ್ಳ ಲತಾಂಗಿಯರು ಎನ್ನಿಸಿಕೊಂಡಿರುವ ಪುಣ್ಯಾಂಗನೆಯರ ಸಮೂಹವು ಶೋಭಿಸುತ್ತಿತ್ತು.

ಇಲ್ಲಿ ಕವಿ ಮಾಡಿರುವ ವೇಶ್ಯೆಯರ ವರ್ಣನೆಯನ್ನು ನೋಡಿದರೆ ಅತಿಯಾಯಿತೇನೋ ಅಂತೆನ್ನಿಸುತ್ತದೆ. ಎಲ್ಲಾ ಕವಿಗಳು ಸ್ತ್ರೀಯರನ್ನು ಅತಿಶಯವಾಗಿ ವರ್ಣಿಸಿದ್ದಾರೆ. ಆದರೆ ರಾಘವಾಂಕ ವರ್ಣಿಸತಕ್ಕ ಜೋಡಿ ಕಳಸದಂತೆ ಉತ್ತುಂಗ ಕುಚಗಳ ಹಾಗೂ ಆನೆಯ ಕುಂಭದಂತೆ ನಿತಂಬಗಳನ್ನು ಹೊಂದಿದ್ದರು ಎಂದು ಹೇಳುವಲ್ಲಿ ವೇಶ್ಯೆಯರಿಗೆ ಅತ್ಯವಶ್ಯವಾಗಿ ಇರಬೇಕಾದ ದೇಹಸೌಷ್ಠವವನ್ನು ಹೇಳುವನು. ವಿಟಪುರುಷನನ್ನು ಸೆರೆಹಿಡಿಯುತಕ್ಕ ಕಣ್ಣುಗಳನ್ನು(ಜಿಂಕೆಯ ಕಣ್ಣುಗಳನ್ನೆ) ಅವಳು ಹೊಂದಿದ್ದಳು. ತನ್ನ ಒನಪು, ಒಯ್ಯಾರದಿಂದ ಮಧುರವಾದ ಮಾತುಗಳಿಂದ, ನೀಳವಾದ ಮುಂಗುರುಳುಗಳಿಂದಾದ ಕೇಶರಾಶಿಯಿಂದ ವಿಟಪುರುಷನನ್ನು ಒಲಿಸಿಕೊಳ್ಳತಕ್ಕ ಸೌಂದರ್ಯವತಿಯರಾಗಿದ್ದರು. ಕೆಂಪು ಹವಳದಂತೆ ಉಗುರುಗಳನ್ನುಳ್ಳ ಲತಾಂಗಿಯರು ಎಂದು ಹೇಳುವಲ್ಲಿ ಅವರ ಮೈಬಣ್ಣ ಬಿಳುಪಾಗಿತ್ತು ಎಂಬುದು ಧ್ವನಿತವಾಗುತ್ತದೆ. ಹೀಗೆ ದೇಹಸೌಷ್ಠವ, ಹಾವ-ಭಾವ-ಮಧುರವಾದ ಭಾಷೆ ಮೊದಲಾದ ಗುಣಗಳಿಂದ ವೇಶ್ಯೆಯರು ಶ್ರೀಮಂತರಾಗಿದ್ದರು.

ಕ್ರಿ.ಶ.1442ರಲ್ಲಿ ಭಾರತಕ್ಕೆ ಬಂದ ವಿದೇಶಿ ಪ್ರವಾಸಿಯಾದ ಅಬ್ದುಲ್ ರಜಾಕ್ ನು ಕೂಡ

ವೇಶ್ಯೆಯರನ್ನು ಕುರಿತು ಕೆಲವೊಂದು ಮಾತುಗಳನ್ನು ಹೇಳಿದ್ದಾನೆ. ವಿಜಯನಗರಕ್ಕೆ ಭೇಟಿ ಕೊಟ್ಟಾಗ ಅಲ್ಲಿ ನೋಡಿದಂತಹ ಜನಜೀವನವನ್ನು ಚಿತ್ರಿಸಿದ್ದಾನೆ. ''ಈ ವೇಶ್ಯಾಗೃಹಗಳ ಭವ್ಯತೆಯನ್ನೂ, ಈ ಗೃಹಗಳಲ್ಲಿರುವ ಯುವತಿಯರ ಸೌಂದರ್ಯವನ್ನು, ಅವರ ಹಾವ-ಭಾವ ವಿಲಾಸಗಳನ್ನು ವರ್ಣಿಸಲು ಸಾಧ್ಯವಿಲ್ಲ. ಭವ್ಯವಾಗಿ ಸಿಂಗರಿಸಿದ ಈ ಗೃಹಗಳ ಮುಂದೆ ವೇಶ್ಯಾಂಗನೆಯರು ಸಿಂಹಾಸನೋಪಾದಿಯಲ್ಲಿ ಅಂದವಾದ ಶಿಲೆಗಳಿಂದ ಕಟ್ಟಿದ ಪೀಠಗಳ ಮೇಲೆ ಕುಳಿತುಕೊಳ್ಳುತ್ತಾರೆ. ಈ ವೇಶ್ಯೆಯರು ಬೆಲೆಯುಳ್ಳ ಮುತ್ತು ಮಾಣಿಕ್ಯಗಳಿಂದಲೂ, ವಸ್ತ್ರಗಳಿಂದಲೂ ಅಲಂಕೃತರಾಗಿರುತ್ತಾರೆ. ಇವರು ನವಯೌವ್ವನೆಯವರು ಹಾಗು ಬಹುರೂಪವತಿಯರು''
(ಅಬ್ದುಲ್ ರಜಾಕ :1442:159:160).

ಈ ಪುಣ್ಯಾಂಗನೆಯರು ಪ್ರಸಾಧನ ಸಾಮಗ್ರಿಗಳಿಂದ ಅಲಂಕರಿಸಿಕೊಂಡು ಇನ್ನೂ ಸುಂದರಿಯರಾಗಿ ಕಾಣುತ್ತಿದ್ದರು.

ವೇಶ್ಯೆಯರ ಆಭರಣಗಳು:

ವೇಶ್ಯೆಯರು ಕಾಲಿಗೆ ಗೆಜ್ಜೆ ಕಟ್ಟಿದ ಕಾಲುಂಗುರ, ಕೈಗೆ ಬಳೆ, ಕಡಗ, ಸೂಡಗ, ನಡುವಿಗೆ ಗೆಜ್ಜೆ, ಡಾಬು, ಕತ್ತಿನಲ್ಲಿ ಹಾರ, ತೋಳಿಗೆ ತೋಳ್ಬಂದಿ ಮತ್ತು ಕೆಂಪಿರುವ ಹೊನ್ನಿನ ಬಳೆ, ಕಿವಿಗೆ ಓಲೆ ಮೊದಲಾದ ಆಭರಣಗಳನ್ನು ಧರಿಸುತ್ತಿದ್ದರು.

''ಉಟ್ಟ ಧವಳಂಬರದ ಸುಲಿಪಲ್ಲ ಮೈಯ್ಯೊಳ್
ಇಟ್ಟ ಗಂಧದ ಮುಡಿಯ ಮಲ್ಲಿಗೆಯ ನಗೆಮೊಗದ
ತೊಟ್ಟ ಮುತ್ತಿನ ತೊಡಿಗೆಗಳ ಬೆಳಗು ದೆಸೆಯ ಪಸರಿಸಿ ಪರ್ಬಿ ಬೀದಿವರೆಯೆ''
(ಹ.ಕಾ.ಸ್ಥ.4-8)

ವೇಶ್ಯೆಯರು ಮುಡಿಗೆ ಮಲ್ಲಿಗೆ ಮಾಲೆಯನ್ನು ಮುಡಿದು, ಮೈಗೆ ಶ್ರೀಗಂಧವನ್ನು ಪೂಸಿಕೊಂಡು ಮುತ್ತಿನ ಆಭರಣಗಳನ್ನು ಧರಿಸಿಕೊಂಡು ಧವಳಾಂಬರವನ್ನು ಉಟ್ಟಿದ್ದರು. ಹೀಗೆ ರಾಘವಾಂಕನು ವೇಶ್ಯೆಯರ ವೇಷ-ಭೂಷಣವನ್ನು ವರ್ಣಿಸುವನು.

ವಿಟಪುರುಷರನ್ನು ಆಕರ್ಷಿಸುವುದಕ್ಕಾಗಿ ಅಲಂಕರಿಸಿಕೊಳ್ಳುವ ವೇಶ್ಯೆಯರು ವಿವಿಧ ಬಣ್ಣಗಳ ಬಟ್ಟೆಯನ್ನು ಉಡುವುದು ಸಾಮಾನ್ಯ. ಹೀಗಿರುವಾಗ ರಾಘವಾಂಕನು ಧವಳಾಂಬರವನ್ನು ಉಟ್ಟಿದ್ದರೆಂದು ಹೇಳುವುದು ಅಷ್ಟೊಂದು ಸೂಕ್ತವಲ್ಲ ಎಂದು ನನ್ನ ಅನಿಸಿಕೆ. ಈ ವೇಶ್ಯೆಯರು ಬಡವರೇನಲ್ಲ. ಇವರು ಸ್ಫಟಿಕದ ಅಡಿಗಲ್ಲುಳ್ಳ, ಚಂದ್ರಕಾಂತ ಶಿಲೆಯ ಗೋಡೆಯುಳ್ಳ ವಜ್ರದ ಕಂಬಗಳುಳ್ಳ, ಹವಳದ ತೊಲೆಗಳುಳ್ಳ ವಿಸ್ತಾರವಾದ ಉಪ್ಪರಿಗೆಗಳಲ್ಲಿ ವಾಸಿಸುತ್ತಿದ್ದರು. ಕುಬೇರನ ಅಳಕಾಪುರಿಯನ್ನು

ವಿಹಾರಿಸುವಂತಿರುವ ಮನೆಯಲ್ಲಿ ವಾಸಿಸುತ್ತಿದ್ದ ಇವರು ಬಿಳಿಯ ಬಣ್ಣದ ಬಟ್ಟೆಯನ್ನು ಉಡುತ್ತಿದ್ದರೆಂದರೆ ಅಷ್ಟು ಸಮಂಜಸವೆನಿಸದು.

ಧವಳಾಂಬರವೆಂದರೆ ರೇಶ್ಮೆಯ ಶುಭ್ರವಸ್ತ್ರವೆಂದು ಅರ್ಥೈಸಬೇಕು. ಪ್ರಾಚೀನ ಕಾಲದಲ್ಲಿ ರಾಜ ಮಹಾರಾಜರು, ಉನ್ನತ ವರ್ಗದವರು ರೇಶ್ಮೆಯ ಶುಭ್ರವಸ್ತ್ರವನ್ನು ಉಡುತ್ತಿದ್ದರೆಂದು (ಹ.ಕಾ.ಸ್ಥ. 8 8–50)[1] ರಾಘವಾಂಕನೆ ಹೇಳುವನು. ಅಂದಿನ ಕಾಲದಲ್ಲಿ ಧವಳವರ್ಣದ ರೇಶ್ಮೆಯ ವಸ್ತ್ರವನ್ನು ಧರಿಸುವುದು ಪ್ರತಿಷ್ಠೆಯ ವೈಭವದ ಕುರುಹಾಗಿತ್ತು. ಆದ್ದರಿಂದ ಅಂತಹ ವೈಭವದ ಶ್ರೀಮಂತಿಕೆಯ ಚಿಹ್ನೆಯಾಗಿ ಧವಳಾಂಬರವನ್ನು ಉಡುತ್ತಿದ್ದರೆಂದು ಅರ್ಥೈಸಬಹುದು. ಇಲ್ಲಿ ಧವಳಾಂಬರವೆಂದರೆ 'ದಿವ್ಯಾಂಬರವೆಂದೇ ಅರ್ಥೈಸಬೇಕು.

ಈ ನನ್ನ ಅಭಿಪ್ರಾಯಕ್ಕೆ ಪೂರಕವಾಗಿ ಹರಿಶ್ಚಂದ್ರಕಾವ್ಯದಲ್ಲಿಯೇ ಆಧಾರ ಸಿಗುವುದು. ರಾಘವಾಂಕನು ಹರಿಶ್ಚಂದ್ರನ ವೇಷ-ಭೂಷಣವನ್ನು ಹೇಳತಕ್ಕ ಸಮಯದಲ್ಲಿ ಧವಳಾಂಬರ' (ಹ.ಕಾ. ಸ್ಥ4–3)[2] ಎಂಬ ಶಬ್ದದ ಉಲ್ಲೇಖವಿದೆ. ಇದೇ ಸನ್ನಿವೇಶವನ್ನು ಹರಿಶ್ಚಂದ್ರಕಾವ್ಯದ 'ಕ' ಪಾಠಾಂತರದಲ್ಲಿ 'ದಿವ್ಯಾಂಬರ' ಎಂದಿದೆ. ಅಲ್ಲದೆ ಹರಿಶ್ಚಂದ್ರರಾಜನು ಸತಿಸುತಮಂತ್ರಿ ಸಹಿತ ವಿಶ್ವಾಮಿತ್ರ ಮುನಿಗೆ ಉಟ್ಟಿದ್ದ ಉಡಿಗೆಯನ್ನು ಅರ್ಪಿಸತಕ್ಕ ಸಮಯದಲ್ಲಿ ''ಅವರೊಬ್ಬರ ಒಂದೊಂದನ್ನುಟ್ಟ ದಿವ್ಯಾಂಬರವೆನಿಸುತ್ತದೆ''.... (ಹ.ಕಾ.ಸ್ಥ.8–50)[3] ಎಂದಿದೆ. ಇವುಗಳನ್ನು ಗಮನಿಸಿದಾಗ 'ದಿವ್ಯಾಂಬರ' ಎಂದು ಬರಬೇಕಾದಲ್ಲಿ ಧವಳಾಂಬರ ಎಂದು ಬಂದಿದೆ. ಇಂತಹ ದೋಷವೇ ವೇಶ್ಯೆಯರ ವೇಷವನ್ನು ವರ್ಣಿಸತಕ್ಕ ಸಮಯದಲ್ಲಿ ಆಗಿರುವ ಸಾಧ್ಯತೆಯು ಉಂಟು. ಇನ್ನೊಂದು ಪಾಠಾಂತರವನ್ನು ನೋಡಿದರೆ ಸತ್ಯಾಸತ್ಯೆಯ ತಿಳಿಯಬಹುದು. ಆದ್ದರಿಂದ ವೇಶ್ಯೆಯರು ಉಟ್ಟಿರತಕ್ಕ ವಸ್ತ್ರವು 'ಧವಳಾಂಬರ' ವೊ ಅಥವಾ ದಿವ್ಯಾಂಬರವೋ' ಎಂಬ ಸಂದೇಹ ಹಾಗೆ ಉಳಿದಿದೆ.

ವೈಜ್ಞಾನಿಕವಾಗಿ ವಿಚಾರಮಾಡಲಾಗಿ ಬಿಳಿ ಬಣ್ಣವು ಏಳು ಬಣ್ಣಗಳಿಂದಾದುದು. ಇದರ ಸಂಕೇತವಾಗಿ ಅವರು ಬಿಳಿಯ ಬಣ್ಣದ ಬಟ್ಟೆಯನ್ನು ಉಡುತ್ತಿದ್ದರೋ ಏನೋ. ವಿವಿಧ ಬಣ್ಣಗಳು ಬಿಳಿಯಬಣ್ಣದಲ್ಲಿ ಅಡಗಿವೆ. ಅಂತಹ ವಿವಿಧ ಬಣ್ಣಗಳುಳ್ಳ ಬಿಳಿಯ ವಸ್ತ್ರವನ್ನು ಧರಿಸುತ್ತೇವೆ ಎಂಬ' ಹೆಮ್ಮೆಯ ಸಂಕೇತವೂ ಆಗಿರಬಹುದು ಈ ಧವಳಾಂಬರ

ಬಿಳಿಯ ಬಣ್ಣದ ರೇಶ್ಮೆಯ ವಸ್ತ್ರವನ್ನು ಯಾರೇ ಉಟ್ಟರೂ ಸುಂದರವಾಗಿ ಕಾಣುತ್ತಾರೆ. ಬಿಳಿಯ ಬಣ್ಣದ ವಸ್ತ್ರವನ್ನು ವೇಶ್ಯೆಯರು ಉಡಬಾರದೆಂದು ಎಲ್ಲಿಯೂ ಹೇಳಿಲ್ಲ. ಆದರೆ ಕೆಲವೊಂದು ಬಣ್ಣ ಕೊಟ್ಟಿರುವ ವಿಶಿಷ್ಟತೆಯಿಂದ ಅದು ಅವರಿಗೆ ಸರಿಯಲ್ಲ ಎಂಬ ಅನಿಸಿಕೆ; ಅದೂ ಅಲ್ಲದೆ ಬಿಳಿಯ ಬಣ್ಣ ಮನವನ್ನು ಆಕರ್ಷಿಸಿ ಮುದಗೊಳಿಸುತ್ತದೆ ಹೊರತು ಕೆರಳಿಸುವುದಿಲ್ಲ. ವೇಶ್ಯೆಯರ ಕಾರ್ಯ ಮುದಗೊಳಿಸುವುದಷ್ಟೇ ಅಲ್ಲ ಕೆರಳಿಸುವುದೂ ಆಗಿದೆ. ಆದ್ದರಿಂದ ಬಿಳಿಯ ವರ್ಣ ಅವರಿಗೆ ಸೂಕ್ತವಲ್ಲವೆಂದು ನನ್ನ ಅಭಿಪ್ರಾಯ.

ಯಾವ ಕವಿಯೂ ವೇಶ್ಯೆಯರು ಧವಳಾಂಬರವನ್ನು ಉಡುತ್ತಿದ್ದರೆಂದು ಹೇಳಿಲ್ಲ. ಇದನ್ನು ರಾಘವಾಂಕನು ಹೇಳಿರುವುದರಿಂದ ಅದು ಆತನ ವೈಶಿಷ್ಟ್ಯವೆಂದು ಹೇಳಬೇಕು.

ವೇಶ್ಯೆಯರು ಹೊಟ್ಟೆಪಾಡಿಗಾಗಿ ವೃತ್ತಿಯನ್ನು ಅವಲಂಬಿಸಿದರೂ ಕೂಡ ಅವರ ಬದುಕು ಕಲಾತ್ಮಕವಾಗಿತ್ತು. ಕಲೆಗೂ ಮನರಂಜನೆಗೂ ಅವರ ಮನದಲ್ಲಿ ವಿಶೇಷ ಸ್ಥಾನವಿತ್ತು; ವೇಶ್ಯೆಯರು ತಮ್ಮ ಬಿಡುವಿನ ವೇಳೆಯಲ್ಲಿ ವೀಣೆ,ಗೀತ,ನೃತ್ಯ ಹಾಗು ವಾದ್ಯಗಳನ್ನು ಕಲಿಯು ತ್ತಿದ್ದರು. ಚೆಂಡಾಟ,ಕೋಲಾಟ,ಜಬುಮುರಿ,ಉಯ್ಯಾಲೆ ಇವುಗಳಲ್ಲದೆ ವಿಶೇಷವಾಗಿ ಪಗಡೆ,ಚದುರಂಗ ಆಟಗಳನ್ನು ಆಡುತ್ತಿದ್ದರು. (ಹ.ಕಾ.ಸ್ಥಂ 4— 9,15)

ವೇಶ್ಯೆಯರಿಗೆ ಸೌಂದರ್ಯ ಹಾಗು ದೇಹಸೌಷ್ಠವ ಮುಖ್ಯ. ಅದನ್ನು ಕೆಡದಂತೆ ಕಾಪಾಡಿ ಕೊಳ್ಳುವ ಬಗ್ಗೆ,ಅನ್ಯರ ದೃಷ್ಟಿ ತಾಗದಂತೆ ಎಚ್ಚರಿಕೆ ವಹಿಸಲು ತಾಯಂದಿರು ತಮ್ಮ ಮಕ್ಕಳಿಗೆ ಬುದ್ಧಿ ಹೇಳುವರು. ವೇಶ್ಯೆಯರಿಗೆ ತಮ್ಮ ಮಕ್ಕಳ ಚೆಲುವಿನ ಬಗೆಗೆ ಎಲ್ಲಿಲ್ಲದ ಅಭಿಮಾನ. ತಮ್ಮ ಮಗಳ ಚೆಲುವಿಗೆ ತಕ್ಕ ವಿಟಪುರುಷನನ್ನು ಕಾಣಲಾರದೆ ಕೊರಗುವುದು ಈ ಪದ್ಯದಲ್ಲಿ ವ್ಯಕ್ತವಾಗುತ್ತದೆ.

''ಈ ನಗರಿಯೊಳಗೆನ್ನ ಮಗಳಿಗೆಣೆಯಿಲ್ಲ ಸು
ಮ್ಮಾನಿ ಸನ್ಮಾನಿಯಭಿಮಾನಿ ಕಡುನೀರೆ ಕಮ
ಲಾನನೆಯ ರೂಹಿಂಗೆ ಸರಿಯಪ್ಪ ವಿಟರ ನಾನಾರುವಂ ಕಂಡದಿಲ್ಲ''
(ಹ.ಕಾ.ಸ್ಥ.4--20)

ಎಲ್ಲಾ ವೇಶ್ಯೆಯರು ತರುಣಿಯರಾಗಿ,ಸೌಂದರ್ಯವತಿಯರಾಗಿ ಇದ್ದಿಲ್ಲ. ಅಲ್ಲಲ್ಲಿ ಕುರೂಪಿ ಯರಾಗಿರತಕ್ಕ,ವಯಸ್ಸಾಗಿರತಕ್ಕ ಸೂಳೆಯರೂ ಇದ್ದರು.

'' ಮಸಿಗಪ್ಪಡವನುಟ್ಟು ತುರುಬಿಟ್ಟು ನರೆದಲೆಗೆ
ಮುಸುಕಿಟ್ಟು ಬಿದ್ದ ಪೆರ್ಮೊಲೆಗಳಿಗೆ ರವಕೆಯಂ
ಸಸಿನೆ ಬಿಗಿದಿವೆಯುದಿರ್ದ ಕಣ್ಗೆ ಕಾಡಿಗೆ ಯೆಚ್ಚ ಸದೆಸೊಪ್ಪನಣಲೊಳಡಸಿ
ವಸುಡುಗಾಣದ ತೆರದಿ ಹಿಂದೆ ನೋಡಿಟ್ಟು ನೆರೆ
ನಸಿದ ರಾಗದಿ ಕೊಳೆತ ಹಾಡ ಬಗುಳುತ ಗಂಡು
ವೆಸರು ಸುಳಿಯಲ್ಕೆ ಬಾರೆನ್ನಾಣೆಯ[illegible] ಮುದುಪಾರ್ದಳೊಂದೆಸೆಯೊಳು''
(ಹ.ಕಾ.ಸ್ಥ.4—27)

ವಯಸ್ಸಾದುದರಿಂದ ಅಂಗಸೌಷ್ಠವ,ಸೌಂದರ್ಯ ಇಲ್ಲವಾದ್ದರಿಂದ ಇಮ್ಮಡಿಯಲ್ಲೂಯೇ ಸುಂದರಳಾಗಿ ಕಾಣಲು ಓರ್ವ ವೇಶ್ಯೆಯು ಮಾಡತಕ್ಕ ಪ್ರಯತ್ನವನ್ನು ಕವಿ ಅತ್ಯಂತ ನೈಜವಾಗಿ ಇಲ್ಲಿ ಚಿತ್ರಿಸಿ ದ್ದಾನೆ. ವಯಸ್ಸಾದುದರ ಸಂಕೇತವಾಗಿ ಮೂಡಿದ ನೆರೆಕೂದಲನ್ನು ಮರೆಮಾಡಲೆಂದು ತಲೆಗೆ ಮುಸುಕನ್ನು ಹಾಕುವಳು. ಜೋತುಬಿದ್ದ ಪೆರ್ಮೊಲೆಗಳನ್ನು ಸರಿಯಾಗಿ ನಿಲ್ಲುವಂತೆ ರವಿಕೆ ಯನ್ನು ಬಿಗಿಯಾಗಿ ಕಟ್ಟುವಳು. ಕಣ್ಣಿಯು ಕೂದಲು ಇಲ್ಲದಿದ್ದರೆ ಮುಖ ಸುಂದರವಾಗಿ ಕಾಣುವುದಿಲ್ಲ. ಹಾಗಾಗಿ ಅವಳು ಕೂದಲು ಉದುರಿದ ಕಣ್ಣೆವೆಗಳಿಗೆ ಕಾಡಿಗೆಯನ್ನು ಹಚ್ಚ ಸಾದರೂ ವಿಟ ಕೋರಿಸಲು ಪ್ರಯತ್ನಿ ಸುತ್ತಿದ್ದಳೆಂದು ಹೇಳುವಲ್ಲಿ ಕವಿಯ ಸೌಂದರ್ಯಪ್ರಜ್ಞೆ ಧ್ವನಿತವಾಗುತ್ತದೆ.

ಬಾಯಲ್ಲಿ ಹಲ್ಲಿಲ್ಲ. ಆ ಬೊಚ್ಚು ಬಾಯನ್ನು ಸುಂದರವಾಗಿ ಕಾಣಿಸಲು ಬಾಯಲ್ಲಿ ತಾಂಬೂಲವನ್ನಿಟ್ಟುಕೊಂಡಿದ್ದಾಳೆ. ಇವೆಲ್ಲಕ್ಕಿಂತ ಹೆಚ್ಚಾಗಿ ಬೆಳಕಿಗೆ ಬಂದರೆ ತನ್ನ ನೈಜ ರೂಪ ವ್ಯಕ್ತವಾದೀತೆಂಬ ಅಂಜಿಕೆಯಿಂದ ತನ್ನ ಮುಖದ ಹಿಂದೆ ದೀಪವನ್ನಿಟ್ಟುಕೊಂಡು ಹಾಡುತ್ತಿದ್ದಾಳೆಂದು ಮುದಿ ವೇಶ್ಯೆಯ ಚಿತ್ರಣವನ್ನು ಕವಿ ಇಲ್ಲಿ ಕೊಟ್ಟಿದ್ದಾನೆ.

ವೇಶ್ಯಾವಾಟಿಕೆಯ ವರ್ಣನೆಯನ್ನು ಸಂಪ್ರದಾಯಶರಣನಾಗಿ ಚಿತ್ರಿಸಿದ್ದರೂ ಕೂಡ ಇಂಥ ಕೆಲವೊಂದು ಚಿತ್ರಣವನ್ನು ಸ್ವಂತಿಕೆಯಿಂದ ಚಿತ್ರಿಸಿದ್ದಾನೆ. ಇಂಥ ಘಟನೆಯನ್ನು ತನ್ನ ಜೀವಿತಾವಧಿಯಲ್ಲಿ ಎಲ್ಲಿಯೋ ನೋಡಿದ್ದಾನೆ. ಅದನ್ನು ಮುದಿವೇಶ್ಯೆಯನ್ನು ಚಿತ್ರಿಸುವಲ್ಲಿ ಚಿತ್ರಿಸಿ, ಸ್ವಂತಿಕೆ ಮೆರೆದಿದ್ದಾನೆ.

ಮುದಿ ವೇಶ್ಯೆಯರು ಕಿರಿಯರಿಗೆ ತಮ್ಮ ವೃತ್ತಿ ರಹಸ್ಯಗಳನ್ನು ತಿಳಿಸುತ್ತಿದ್ದರು. ತಮ್ಮ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗುವ ಕೌಶಲ್ಯ, ವಿಟರನ್ನು ಆಕರ್ಷಿಸಿ ತಮ್ಮ ಬಲೆಯಲ್ಲಿ ಹಾಕಿಕೊಳ್ಳುವ ವಿಧಾನ, ಸಮಯ ಸಿಕ್ಕಾಗ ಅವರನ್ನು ದೋಚತಕ್ಕ ರೀತಿ, ವಿಟರಿಂದ ಹೆಚ್ಚಿನ ಸಂಪತ್ತು ಸಿಗದಿದ್ದಾಗ ಅವರನ್ನು ಯಾವ ರೀತಿ ನಿರ್ಲಕ್ಷಿಸಬೇಕು ಮುಂತಾದವುಗಳನ್ನು ತಿಳಿಸುತ್ತಿದ್ದರು.

" ನೆರೆದ ಮಿಂಡರೊಳಧಿಕನೆಂದೊಡಲನಿಕ್ಕು ಬೋ
ಸರಿಸಿಕೊಳ್ಳೊತ್ತೆಯಂ ತೆಗೆಯದವನರ್ಥಮಂ
ತಿರಿದುಣಸುವನ್ನವೊಲದವಳಂತೆ ಮುನಿದು ಮುದ್ದಿಸಿ ಜರೆದು ಕಾಲ್ವಿಡಿವುದು
ಹುರುಡಿಸುವುದಳುವುದೊಳಗಾದ ಹವಣರಿದು ಗೋ
ಣ್ಮುರಿಗೊಂಡು ಹಣದಿಂಬುದೊಬ್ಬನೊಳಿರದಿರೆಂದು
ತರುವಲಿಗೆ ಕಲಿಸಿದಳು ಮುದಿಸೂಳೆ ಹುಲಿಮರಿಗೆ ಬೇಂಟೆಯಂ ಕಲಿಸುವಂತೆ"
(ಹ.ಕಾ.ಸ್ಥ. 4–21)

ನೆರೆದ ಮಿಂಡರಲ್ಲಿ ಯಾರು ಶ್ರೀಮಂತರೋ ಅವರಿಗೆ ನಿನ್ನ ದೇಹವನ್ನು ಅರ್ಪಿಸು. ಅಂತಹ ಶ್ರೀಮಂತನು ಸಿಕ್ಕಾಗ ಬೇಸರಿಸದೆ ಆತನ ಸಂಪತ್ತೆಲ್ಲವನ್ನೂ ಸುಲಿ; ಆ ಸಂಪತ್ತನ್ನು ಹೇಗೆ ಸುಲಿಗೆ ಮಾಡಬೇಕೆಂಬುದನ್ನು ಬಹು ಚೆನ್ನಾಗಿ ಮುದಿ ಸೂಳೆಯರು ಕಿರಿಯರಿಗೆ ಕಲಿಸುತ್ತಿದ್ದರೆನ್ನುವುದು ಇದರಿಂದ ಸ್ಪಷ್ಟವಾಗುತ್ತದೆ. ಶ್ರೀಮಂತನು ಸಿಕ್ಕಾಗ ಮೊದಲು ಆತನಿಗೆ ಒಲಿದವಳಂತೆ, ಆತನನ್ನು ಮುದ್ದಿಸಿದಂತೆ, ನಂತರ ಆತನಿಗೆ ಮುನಿದಂತೆ, ಜರೆದಂತೆ ಮಾಡಿ ಆತ ಸಿಟ್ಟಿಗೆದ್ದರೆ ಆತನ ಕಾಲು ಹಿಡಿದಂತೆ ಮಾಡಿ, ನಾನಾ ರೀತಿಯಿಂದ ಆತನ ಅರ್ಥ[illegible]ನ್ನು ಸುಲಿಗೆ ಮಾಡು. ಅಲ್ಲದೆ ಸಮಯ ನೋಡಿಕೊಂಡು ಆತನನ್ನು ಸಂಪೂರ್ಣವಾಗಿ ನಾಶಮಾ[illegible]. ಶ್ರೀಮ[illegible] ಪುರುಷ ಸಿಕ್ಕಿದ್ದಾನೆಂದು ಕೊನೆಯ [illegible] ಒರ್ವನಲ್ಲಿಯೇ ಉಳಿಯಬೇಡವೆಂದು ಮುದಿಸೂಳೆ ಕಿರಿಯರಿಗೆ ಹುಲಿಯು, ತನ್ನ ಮರಿಗೆ ಬೇಟೆಯನ್ನು ಕಲಿಸುವಂತೆ ಕಲಿಸುತ್ತಿದ್ದಳು

"ಚೆನ್ನಾಗಿ ಅಲಂಕರಿಸಿಕೊಂಡು, ದೊಡ್ಡವರು ಸಂಗಕ್ಕೆ ಕರೆದರೆ ಮನದಲ್ಲಿ ಕೋಪಗೊಳ್ಳದೆ, ಸಂಕೋಚಗೊಳ್ಳದೆ ಅವರನ್ನು ಉಪಚರಿಸು; ಹಣವನ್ನು ಪಡೆ, ಮಿತಿ ಮೀರಿ ಬಯಸಿ ಜಾತಿಯೊಡನೆ ಪ್ರತಿಸ್ಪರ್ಧಿಯಾಗಿ ನಿಲ್ಲದಿರು" (ಹ.ಕಾ.ಸ್ಥ.4–24) ಎಂದು ಬೋಧಿಸುವ ಜೊತೆಯಲ್ಲಿಯೇ ಕುಲಕ್ಕೆ ಕಂಟಕಳಾಗಬೇಡ ಎನ್ನುವ ಎಚ್ಚರಿಕೆಯನ್ನು ನೀಡುತ್ತಿದ್ದರು.

ಹೀಗೆ ವೇಶ್ಯೆಯರು ತಮ್ಮ ತಮ್ಮ ಗೃಹದಲ್ಲಿ ಇದ್ದುಕೊಂಡು ವೃತ್ತಿಯನ್ನು ನಡೆಸುತ್ತಿದ್ದರೆ ಇನ್ನೂ ಕೆಲವು ಜಾರೆಯರು ಜಾರನು ಹೇಳಿದ ಸಂಕೇತಸ್ಥಳಕ್ಕೆ ಸರ್ವಾಲಂಕಾರಭೂಷಿತೆಯರಾಗಿ ಯಾರ ಕಣ್ಣಿಗೂ ಕಾಣದಂತೆ ಕಳ್ಳಹೆಜ್ಜೆಯನ್ನಿಡುತ್ತ ಹೋಗುತ್ತಿದ್ದರು. 'ಕಾಮಾತುರಾಣಾಂ ನ ಲಜ್ಜಾ ನ ಭಯಂ' ಎನ್ನುವಂತೆ ತಮ್ಮ ಬಯಕೆಯನ್ನು ತೀರಿಸಿಕೊಳ್ಳುವುದಕ್ಕಾಗಿ ಎಲ್ಲೆಂದರಲ್ಲಿಯೇ ಅವರು ಕೂಡುತ್ತಿದ್ದರೆಂಬುದು ಈ ಪದ್ಯದಿಂದ ತಿಳಿದು ಬರುತ್ತದೆ.

"ಎಳಸಿ ಕೀಳಿಲೊಳು ಹಿತ್ತಿಲೊಳು ಕೊಟ್ಟಿಗೆಯೊತ್ತು
ಗಳೊಳು ಭಿತ್ತಿಯ ಮರೆಗಳೊಳು ಸಂದಿಯೊಳು ಗೊಂದಿ
ಗಳೊಳಿಡಿದ ಮರಗತ್ತಲೆಯ ನೆಲೆಯೊಳೊರಗಿರಲು ಮುಳು ತೆವರು ಕುಳಿಯೆನ್ನದೆ
ಎಳೆಯ ನುಡಿ ನಸುಚುಂಬನಂ ಸೂಸದುಸುರು ಸೊ
ಪ್ಪುಳು ನುಡಿದು ಗಾಸಿ ನಡದುಗುರು ಸಟಿಲಿಸದುಡಿಗೆ
ಗಳೊಳು ನೆರೆನೆರೆದು ಕತ್ತಲೆ ಹರೆಯ ಹರಿಯುತಿಹ ಜಾರೆಬುದ್ಧಿನವ"....
(ಹ.ಕಾ.ಸ್ಥ. 4–31)

ಜಾರೆಯರು ತಮ್ಮ ಬಯಕೆಯನ್ನು ತೀರಿಸಿಕೊಳ್ಳುವುದಕ್ಕಾಗಿ ಎಲ್ಲೆಂದರಲ್ಲಿ ಕೂಡುತ್ತಿದ್ದರು. ಅವರ ಕುಲಕ್ಕೆ ಇಂಥದೇ ಸ್ಥಳಬೇಕೆಂಬುದಿಲ್ಲ. ಹಿತ್ತಲಿನಲ್ಲಿ ದನದ ಕೊಟ್ಟಿಗೆಯ ಪಕ್ಕಕ್ಕೆ, ಗೋಡೆಗಳ ಮರೆಯಲ್ಲಿ, ಸಂದುಗೊಂದಿಗಳಲ್ಲಿ ಮರದ ಕತ್ತಲೆಯಲ್ಲಿ, ನೆಲದ ಮೇಲೆ ಕಲ್ಲುಮುಳ್ಳು ಎನ್ನದೆ, ತಗ್ಗು–ದಿನ್ನೆಯೆನ್ನದೆ ಸರಸ ಚಕ್ಕಂದ ಮಾಡುತ್ತಿದ್ದರೆಂದು ಕವಿ ಬಹು ಮಾರ್ಮಿಕವಾಗಿ ಚಿತ್ರಿಸಿರುವನು. ಅವರ ಕೂಟವನ್ನು ಕಣ್ಣಾರೆ ಕಂಡಷ್ಟು ಅವರ ಕ್ರಿಯೆಗಳನ್ನು ನೈಜವಾಗಿ ಚಿತ್ರಿಸಿದ್ದಾನೆ.

ಇಂಥ ಜಾರೆಯರು ರಸ್ತೆಯ ಪಕ್ಕದಲ್ಲಿ ನಿಂತು ವಿಟಪುರುಷರನ್ನು ಯಾವ ರೀತಿ ವಯ್ಯಾರ ಮಾಡುತ್ತ ಆಕರ್ಷಿಸಿ ಬಲೆಗೆ ಹಾಕಿಕೊಳ್ಳುತ್ತಿದ್ದರೆಂಬುದನ್ನು ಈ ಕೆಳಗಿನ ಪದ್ಯದಲ್ಲಿ ವರ್ಣಿಸಿದ್ದಾನೆ. ತಾನು ಕಣ್ಣಾರೆ ಕಂಡಷ್ಟು ಸಹಜವಾಗಿ ಚಿತ್ರಿಸಿದ್ದಾನೆ. ಅವರ ಕಣ್ಣೋಟ, ಅವರ ಹಾವಭಾವ, ಅವರು ಸೀರೆ ನೆರಗನ್ನು ಜಾರಿಸುವಿಕೆಯನ್ನು, ವರ್ಣಿಸುವುದನ್ನು ನೋಡಿದರೆ ಬ್ರಹ್ಮಚಾರಿಯಾದ ರಾಘವಾಂಕನ ಬ್ರಹ್ಮಚರ್ಯದ ಬಗ್ಗೆ ಸಂಶಯ ಬರುವಷ್ಟು ಸಹಜತೆಯಿಂದ ಕೂಡಿದೆ ಆ ವರ್ಣನೆ. ಅದು ಈ ರೀತಿ ಇದೆ.

"ನಡೆ ನೋಡಿ ನೋಡದಂದದಿ ಮುಗಿದ ಕಡೆಗಣ್ಣ
ಮುಡಿಯುಡುವ ನೆವದಿ ಮೊಲೆಗಳನ ತೋರಿಸಿ ಮೇಲು
ದಿಡುವ ಕಯ್ಗಳ ನಿರಿಯನಡಿಗಡಿಗೆ ಕಳೆದುಡುವ ನೆವದಿ ನಾಚಿದರೆವ ಚದುರು

ನುಡಿಸಿದಡೆ ನಸುನಗುವ ಕೆಲದೆಗೆದು ಮೊಗವ ನೀ
ರ್ಗುಡಿಯಲೆರೆವುತ್ತ ಮೊನೆವೆರಸಿದಲಗಂ ತೋರ್ಪ
ಕುಡಿ ನಾಲಗೆಯೊಳೊಪ್ಪೆಯೊಪ್ಪಿದರು ಶಿಷ್ಟಜನರಿಟ್ಟ ಬಲುಗಾಣದಂತೆ"
(ಹ.ಕಾ.ಸ್ಥ.4–38)

ವಿಟಪುರುಷರನ್ನು ಆಕರ್ಷಿಸಿ ಬಲೆಗೆ ಹಾಕಿಕೊಳ್ಳುವ ಜಾರೆಯರ ವರ್ಣನೆಯನ್ನು ಬಹು ನೈಜವಾಗಿ ಚಿತ್ರಿಸಿದ್ದಾನೆ ರಾಘವಾಂಕ. ವಿಟಪುರುಷರನ್ನು ನೋಡಿಯೂ ನೋಡದಂತೆ ಕಣ್ಣುಗಳನ್ನು ಮುಚ್ಚಿದವರಾಗಿ, ಹೂವನ್ನು ಮುಡಿಯುವ ನೆಪದಿ ಮೊಲೆಗಳನ್ನು ತೋರಿಸುತ್ತ, ನೆರಿಗೆಗಳನ್ನು ಹಿಳುಕುವ ನೆಪದಿ ನಾಣ್ಚಿದವ ಚದುರ, ಮಾತನಾಡಿಸಿದರೆ ನಸುನಗುವ, ನೀರು ಕುಡಿಯುವ ನೆಪದಲ್ಲಿ ಹರಿತವಾದ ನಾಲಗೆಯನ್ನು ತೋರಿಸತಕ್ಕ ಜಾರೆಯರನ್ನು ಕವಿ ಶಿಷ್ಟ ಜನಕ್ಕೆ ಹಾಕಿದ ದೊಡ್ಡ ಗಾಳವೆಂದು ವರ್ಣಿಸುತ್ತಾನೆ.

ರಾಘವಾಂಕನು ಸಂಪ್ರದಾಯ ಶರಣನಾಗಿ ವೇಶ್ಯೆಯರ ಬಾಹ್ಯ ಜೀವನವನ್ನು ಮಾತ್ರ ಚಿತ್ರಿಸದೆ ಅವರ ಅಂತರಂಗದ ದುಃಖ, ಮಾನಸಿಕ ತುಮುಲಗಳ ಕಡೆಗೂ ತನ್ನ ಲಕ್ಷ್ಯ ಹರಿಸಿದ್ದಾನೆ. ವೇಶ್ಯೆಯರಿಗೆ ಹಣವೇ ಪ್ರಧಾನ; ಮನಸ್ಸಲ್ಲ ಎಂಬುದು ಅವರ ಬದುಕನ್ನು ಮೇಲ್ನೋಟಕ್ಕೆ ಪರಿಶೀಲಿಸಿದಾಗ, ಅವರಿಗೆ ಹಣಕ್ಕಿಂತಲೂ ಮನಸ್ಸಿಗೆ ಪ್ರಧಾನ ಸ್ಥಾನವನ್ನು ಕೊಟ್ಟಿದ್ದಾರೆ ಎಂಬುದು ಕೆಲವು ವೇಶ್ಯೆಯರ ಬದುಕಿನ ಚಿತ್ರಣದಿಂದ ಕಂಡು ಬರುತ್ತದೆ. ಓರ್ವ ವೇಶ್ಯೆ ತಾನು ಮೆಚ್ಚಿದವನಿಗೆ ಮನಸ್ಸನ್ನು ಕೊಟ್ಟು ಆತನನ್ನು ಮರೆಯಲಿಕ್ಕೆ ಆಗದೆ ಮುದಿವೇಶ್ಯೆಯ ನಿಂದನೆಗೆ ಗುರಿಯಾಗಿ ಯಾವ ರೀತಿ ಮಾನಸಿಕ ಹಿಂಸೆ ಅನುಭವಿಸುತ್ತಿದ್ದಾಳೆಂಬುದನ್ನು ಈ ಪದ್ಯದಲ್ಲಿ ಹೃದಯಂಗಮವಾಗಿ ಕಂಡರಿಸಿದ್ದಾನೆ ರಾಘವಾಂಕ.

"ನೋಡದಿರ್ದಪೆನೆಂಬೆ ಕಣ್ಣು ನೋಡದಿರವು ಮಾ
ತಾಡದಿರ್ದಪೆನೆಂಬೆ ಬಾಯ್ಬಿಡುಕದಿರದು ನಗೆ
ಗೂಡದಿರ್ದಪೆನೆಂಬೆ ಮುನಿಸುಡು ನಗದಿರದು ಮೈಯೊಡ್ಡಿ ಕುಳ್ಳಿರೆಂದೊಡೆ
ನಾಡೆ ತನು ಮೇಲ್ವಾಯದಿರದು ಸಂಚದೋರಿ
ಕೂಡೆನೆಂದೊಡೆ ಕಳೆಗಳುರವಣಿಸದಿರವೇನು
ಮಾಡುವೆಂ ಮುನಿಸು ನೆಲೆಗೊಳ್ಳದವನಂ ಕಂಡೊಡೆಂದೊಬ್ಬ ಸತಿ ನುಡಿದಳು"
(ಹ.ಕಾ.ಸ್ಥ. 4–13)

ತಾನೊಲಿದ ಪುರುಷನನ್ನು [illegible] ಅನ್ಯರ ಜತೆಗೆ ಕೂಡದೆ ಮಾನಸಿಕ ಯಾತನೆಯನ್ನು ಅನುಭವಿಸತಕ್ಕ ಓರ್ವ ವೇಶ್ಯೆಯ ಚಿತ್ರಣವಿದು. ಮುದಿ ವೇಶ್ಯೆ ಉಗ್ರ ಕಟ್ಟು–ಕಟ್ಟಳೆಗಳನ್ನು ವಿಧಿಸಿದರೂ ಕೂಡ ಕಿರಿಯ ವೇಶ್ಯೆಯ ಮನವು ಅದನ್ನು ಮೀರಿ ಯಾವ ರೀತಿ ತಾನೊಲಿದ ನಲ್ಲನಿಗಾಗಿ ಮಿಡುಕುತ್ತದೆ ಎಂಬುದನ್ನು ಬಹು ನೈಜವಾಗಿ ಚಿತ್ರಿಸಿದ್ದಾನೆ. ಮುದಿಸೂಳೆಯ ಅಪ್ಪಣೆಯ ಮೇರೆಗೆ ಆತನನ್ನು ನೋಡಬಾರದೆಂದರೂ ಕೂಡ ಕಣ್ಣುಗಳು ನೋಡದೆ ಇರಲಾರವು. ಮಾತನಾಡಬಾರದೆಂದರೂ ಕೂಡ ಬಾಯಿ ತನ್ನಷ್ಟಕ್ಕೆ [illegible]ದೆ. ಆತನನ್ನು ನೋಡಿ ನಗಬಾರದೆಂದರೂ

ಕೂಡ ಮುಖವು ನಗುವುದನ್ನು ಬಿಡುವುದಿಲ್ಲ. ಆತನ ಹತ್ತಿರ ಕುಳಿತುಕೊಳ್ಳಬಾರದೆಂದರೂ ಕೂಡ ತನುವು ಆಕೆಗೆ ಅರಿವಿಲ್ಲದೆ ಆತನ ಸಮೀಪ ಹೋಗುತ್ತದೆ. ಹೀಗೆ ಆತನನ್ನು ತಿರಸ್ಕರಿಸಲಾರದೆ ಮುದಿ ವೇಶ್ಯೆಯ ಮಾತನ್ನು ಪುರಸ್ಕರಿಸಲಾಗದೆ ಓರ್ವ ಕಿರಿಯ ವೇಶ್ಯೆ ಯಾವ ರೀತಿ ಮಾನಸಿಕ ಯಾತನೆಯನ್ನು ಅನುಭವಿಸುತ್ತಾಳೆಂಬುದರ ಚಿತ್ರಣವನ್ನು ಇಲ್ಲಿ ಕಾಣಬಹುದು.

ವೇಶ್ಯಾವಾಟಿಕೆಯಲ್ಲಿ ವೇಶ್ಯೆಯರು ಶೋಷಣೆಗೆ ಒಳಗಾಗುತ್ತಿದ್ದ ಚಿತ್ರಣ ಈ ಪದ್ಯದಲ್ಲಿದೆ.

"ಓರಂತೆ ನಲ್ಲನುಳಿದಳಲಿನಿಂದಂ ಬಾಷ್ಪ
ಧಾರೆಗಳು ಸುರಿಯೆ ಕಾಮಿನಿಯುರದಲ ಮಣಿಯ
ಹಾರದಂತೆಸೆಯೆ ಕಡುಚಿಂತೆಯಿಂದಂ ಕರಗಿ ಕರಕಪೋಲತೆಯಾಗಿಹ
ನಾರಿಯ ಮುಖೇಂದುವಂ ಪಿಡಿದ್ವೈದು ಹೆಡೆಯ ಕಾ
ಳೋರಗನೊ.........." (ಹ.ಕಾ.ಸ್ಥ. 4-37)

ಇನ್ನೊಂದೆಡೆ ಚಿಕ್ಕ ಪ್ರಾಯದ ಮುಗ್ಧ ವೇಶ್ಯೆಯು ತನ್ನ ನಲ್ಲನನ್ನು ಅಗಲಿದ ದುಃಖದಿಂದ ಭ್ರಮೆಗೊಂಡು ಚಿಕ್ಕನ್ನು ಸಾರಿಸು, ಸೀರೆಯನ್ನು ಬಾಚು, ತಲೆಯನ್ನು ಉಡಿಸು .... ಎಂದು ಹುಚ್ಚುಚ್ಚು ಮಾತನಾಡುತ್ತಿದ್ದಳು. (ಹ.ಕಾ.ಸ್ಥ.4-48, 49, 50).

ವೇಶ್ಯೆಯರು ತಮ್ಮ ಮನೆಗಳ ಬಾಗಿಲಲ್ಲಿ ಗಂಟೆಯನ್ನು ಕಟ್ಟುತ್ತಿದ್ದುದನ್ನು ರಾಘವಾಂಕನು ತಿಳಿಸುತ್ತಾನೆ. "ವೇಶ್ಯೆಯ ಮನೆಯನ್ನು ಗುರುತಿಸುವುದಕ್ಕಾಗಿಯೇ ಪಂಪನ ಕಾಲದಲ್ಲಿ ವೇಶ್ಯೆಯರ ಮನೆಯ ಮುಂದೆ ಗಂಟೆಯನ್ನು ಕಟ್ಟುತ್ತಿದ್ದರು. ಅದು ಹೊಸದಾಗಿ ಆ ಮನೆಗೆ ಪ್ರವೇಶಿಸತಕ್ಕ ವಿಟನು, ಆ ಗಂಟೆಯನ್ನು ಬಾರಿಸಿ ತನ್ನ ಬರವನ್ನು ಸೂಚಿಸಿ ವೇಶ್ಯೆಯಿಂದ ಅಪ್ಪಣೆ ಪಡೆಯುವುದಕ್ಕಾಗಿ, ಆ ಗಂಟೆಯನ್ನು ಕಟ್ಟಿದ್ದರೆಂದು ತಿಳಿಯುತ್ತದೆ. (ದಿಬ್ಬದ್: 1982:191) ಆದರೆ ರಾಘವಾಂಕನ ಕಾಲಕ್ಕಾಗಲೇ ಆ ವೇಶ್ಯೆಯರ ಗೃಹವು ದೈಹಿಕ ಹಸಿವನ್ನು ತೀರಿಸತಕ್ಕ ತಾಣ ಎಂಬುದರ ಸೂಚಕವಾಗಿ, ನೆಲದ ಉಪ್ಪರಿಗೆಗಳ ಮೇಲೆ ಗಂಟೆಯನ್ನು ಕಟ್ಟಲಾಗಿದೆ ಎಂಬಂತೆ ಈ ಕೆಳಗಿನ ಪದ್ಯದ ಮೂಲಕ ತಿಳಿಯುತ್ತದೆ.

"ಹಸುವಿಂಗೆ ಮೇವು ಶಿಶುವಿಂಗೆ ನವನೀತಮಂ
ಹಸಿದವಂಗನ್ನೋದಕಂ ದಾನ ಬೇಳ್ಪಂಗೆ
ಹಸೆದಾನ ವಧುವಿಲ್ಲದವರ್ಗೆ ವಿವಾಹ ವಿಟರಾದವರ್ಗಂಗಸುಖವ
ಬೆಸಗೊಂಬ[illegible]ದೇ ಕುರು[illegible]ಹೆಂದು ಮನೆಯ ಮುಂ
ದೆಸೆ[illegible] ನೆಲೆ[illegible]ಉಪ್ಪರಿ[illegible] ಬಾಗಿಲೊಳು ಮೆರೆವ
ವಿಸುನಿಗಳ ಗಂಟೆ....... ......" (ಹ.ಕಾ.ಸ್ಥ. 4-41)

* ಹಸುವಿಗೆ ಮೇವು, ಶಿಶುವಿಗೆ ಹಾಲು, ಹಸಿದವನಿಗೆ ಅನ್ನೋದರ, ಬೇಡುವವನಿಗೆ ದಾನ ಕೊಡುವುದು ಎಷ್ಟು [illegible] ಮತ್ತು [illegible] ಸಹಜ ಮತ್ತು ಅವಶ್ಯಕವಾಗಿತ್ತೋ ವಿಟಪುರುಷರು ಅಂಗಸುಖವನ್ನು

ಪಡೆಯಲು ವೇಶ್ಯಾವಾಟಿಕೆಗೆ ಹೋಗುವುದು. ಅಂತೆಯೇ ರಾಜರೋಷವಾಗಿ ವೇಶ್ಯೆಯರ ಮನೆಯ ಬಾಗಿಲ ಮುಂದೆ ಗಂಟೆಯನ್ನು ಕಟ್ಟುತ್ತಿದ್ದರು. ಮನುಷ್ಯನಿಗೆ ಬದುಕಲಿಕ್ಕೆ ಆಹಾರ, ನೀರು ಎಷ್ಟು ಅವಶ್ಯಕವೋ ಹಾಗೂ ಸಹಜವೋ ಅಷ್ಟೇ ಅವಶ್ಯಕ ಮತ್ತು ಸಹಜವೆಂಬ ಭಾವನೆ ಅಂದಿನ ಕಾಲದ ಜನರ ತಿಳುವಳಿಕೆಯಾಗಿತ್ತೆನ್ನುವುದು ಇದರಿಂದ ಧ್ವನಿತವಾಗುತ್ತದೆ.

ಸ್ವತಂತ್ರಯುಗದ ಕವಿ ರಾಘವಾಂಕನು, ಸಂಪ್ರದಾಯದ ಬಹಾದುರನ ಬಂಡಿಗೆ ಕೊಳೆರಾಟ್ಟುವ ಪಾಂಡಿತ್ಯದ ಪಾಕಶಾಲೆಯ ಬಾಣಸಿಗನಂತೆ ತೋರುತ್ತಾನೆ. (ಶಿವರುದ್ರಪ್ಪ:1982:125) ಸುದೀರ್ಘವಾಗಿ 50 ಪದ್ಯಗಳಲ್ಲಿ ಮಾಡಿದ ವೇಶ್ಯಾವಾಟಿಕೆಯ ವರ್ಣನೆಯು ಅದರಲ್ಲಿ ಒಂದು. ಸಂಪ್ರದಾಯಶರಣನಾಗಿ ವೇಶ್ಯಾವಾಟಿಕೆಯನ್ನು ವರ್ಣಿಸಿದರೂ ಕೂಡ ಅವರ ಬದುಕಿನ ಮೇಲೆ ಹೊಸಕಿರಣವನ್ನು ಬೀರಿದ್ದಾನೆ. ಹರಿಶ್ಚಂದ್ರಕಾವ್ಯದಲ್ಲಿ ಅವರ ಜೀವನದ ಎಲ್ಲ ಮಗ್ಗಲುಗಳನ್ನು ಚಿತ್ರಿಸಿದ್ದಾನೆ. ಅವರ ಮನೆಯ ವೈಭವದ ವರ್ಣನೆಯಿಂದ ಅವರ ವೇಷ-ಭೂಷಣ, ಅವರ ಆಟ-ಪಾಠ, ಅವರ ಸುಖ-ದುಃಖ, ಅವರ ಹಾವ-ಭಾವ, ಅವರು ಶೋಷಣೆಗೊಳಗಾಗತಕ್ಕ ರೀತಿ ಮೊದಲಾದವುಗಳನ್ನು ಚಿತ್ರಿಸಿದ್ದಾನೆ. ಇವುಗಳನ್ನು ಕಾಟಾಚಾರಕ್ಕಾಗಿ ಚಿತ್ರಿಸದೆ ಅವರ ಜನಜೀವನವನ್ನು ಬಹು ಸಮೀಪದಿಂದ ನೋಡಿದಂತೆ ಚಿತ್ರಿಸಿದ್ದಾನೆ. ವೇಶ್ಯೆಯರ ಮನೆಯ ಮುಂದೆ ಕಟ್ಟಲ್ಪಟ್ಟ ಗಂಟೆ ತನ್ನ ಕಾಲದಲ್ಲಿ ಯಾವ ಅರ್ಥವನ್ನು ಕೊಡುತ್ತಿತ್ತು ಎಂದು ಹೇಳಿದ್ದಾನೆ. ಹೀಗೆ ರಾಘವಾಂಕನು ವೇಶ್ಯಾವಾಟಿಕೆಯ ವರ್ಣನೆಯಲ್ಲಿ ಸ್ವಂತಿಕೆ ಹಾಗು ಜೀವಂತಿಕೆಯನ್ನು ಮೆರೆದಿದ್ದಾನೆ.

## ಮೃಗಯಾ ವಿನೋದ (ಬೇಟೆ):

ಪ್ರಾಚೀನ ಕಾಲದಲ್ಲಿ ರಾಜ ಮಹಾರಾಜರಿಗೆ, ಹಲವಾರು ಮನರಂಜನೆಗಳಲ್ಲಿ ಮೃಗಯಾ ವಿನೋದವು ಒಂದಾಗಿತ್ತು. ರಾಘವಾಂಕನು ಹರಿಶ್ಚಂದ್ರ ಕಾವ್ಯದಲ್ಲಿ ಬೇಟೆಯ ವರ್ಣನೆಯನ್ನು ವಿನೋದಕ್ಕಾಗಿ ಮಾಡಿಲ್ಲ. ಪ್ರಜಾಹಿತಚಿಂತಕನಾದ ಹರಿಶ್ಚಂದ್ರನು ಹಿಂಸೆಕೊಡತಕ್ಕಂಥ ಪ್ರಾಣಿಗಳಿಂದ ಪ್ರಜೆಗಳನ್ನು ರಕ್ಷಿಸುವುದಕ್ಕಾಗಿ ಬೇಟೆಗೆ ಹೊರಟಂತೆ ಚಿತ್ರಿಸಿದ್ದಾನೆ. ಇಲ್ಲಿ ಮನರಂಜನೆಗಿಂತ ತನ್ನ ಪ್ರಜೆಗಳ ಹಿತಚಿಂತನೆಯೆ ಮುಖ್ಯ. ಬೇಟೆಗೆ ರಾಜನ ಜೊತೆಗೆ ಹಲವಾರು ಬಿರುದಾಂಕಿತ ಬೇಡಪಡೆಯು ಹೊರಟಿದೆ. ಅವರು ಕೇವಲ ಉದರ ಪೋಷಣೆಯ ನಿಮಿತ್ತವಾಗಿ ಬೇಟೆಯಾಡದೆ ಅದು ಅವರ ಶೌರ್ಯ ಸಾಹಸದ ಕುರುಹಾಗಿತ್ತೆಂಬುದು ಅವರ ಬಿರುದುಗಳಿಂದ ತಿಳಿದುಬರುತ್ತದೆ. ಹರಿಶ್ಚಂದ್ರಕಾವ್ಯದಲ್ಲಿ ಬರತಕ್ಕ ಬೇಟೆಯ ವರ್ಣನೆಯಿಂದ ಬೇಡಪಡೆ, ಹಾಗು ಬೇಡತಿಯರು ಅಲ್ಲದೆ ರಾಜ ಬೇಟೆಯಲ್ಲಿ ನಿಪುಣತೆಯನ್ನು ಪಡೆದುದು ಗೋಚರಿಸುತ್ತದೆ. ಬೇಡಪಡೆ, ಅವರ ವೇಷ-ಭೂಷಣ, ಆಹಾರ-ವಿಹಾರ, ಬೇಟೆಯ ಪ್ರಕಾರ, ಬೇಟೆಯ ಪರಿಸರ, ಬೇಟೆಯ ಪದ್ಧತಿ, ಬೇಟೆಯ ನೈಪುಣ್ಯವನ್ನು ಸಾದ್ಯಂತವಾಗಿ ವಿವರಿಸಿ ರಾಘವಾಂಕ ಬೇಟೆಯ ಮಹತಿಯನ್ನು, ಮಾಹಿತಿಯನ್ನು ಸಂಪೂರ್ಣವಾಗಿ ಒದಗಿಸಿದ್ದಾನೆ.

ಬೇಟೆಯ ವರ್ಣನೆ ಕಾವ್ಯದ ವಸ್ತುವಿಗೆ ಸಹಜವಾಗಿ ಹೊಂದಿಕೊಂಡು ಮನೋಜ್ಞವಾಗಿದೆ.

<u>ಬೇಡ ಪಡೆ</u>:

ರಾಘವಾಂಕನು ಶಬರ ಪಡೆಯನ್ನು 'ನಿಬ್ಬಸುವ ಕಣ್ಣುಗುಡ್ಡೆ ಕತ್ತಲಿಸುವಂತೆ, ಕತ್ತಲೆಯ ಮೊಟ್ಟೆಗಳಂತೆ, ಹೋಲಿಕೆಗೆ ಹೊರಗಾಗಿ ಬರುತ್ತಿದ್ದ'ರೆಂದು (ಹ.ಕಾ.ಸ್ಥ.5–1) ಹೇಳುವುದರ ಮೂಲಕ ಮುಂದೆ ಚಿತ್ರಿಸತಕ್ಕಂಥ ಅವರ ಭೀಕರ ವ್ಯಕ್ತಿ ಚಿತ್ರಣಕ್ಕೆ ಭದ್ರ ಬುನಾದಿ ಹಾಕುವನು.

''ಕಾರೊಡಲು ಮೇಗಡರ್ದ ಮೆಯ್ದುವಿರು ಕೆಂಗಲಿಪ
ತೋರಗಣ್ಣು ಕೆಮ್ಮೀಸೆ ಗುಜುರುದಲೆ ಬಳೆದ ಕಾ
ಳೋರಗನನೇಳಿಸುವ ತೋಳ್ ನಾರಿ ಹೊಡೆದೊಡೆದ ಹುಣ್ಣು ಮೇಲಣ ಕೈಪೊಡೆ
ಪೇರುರಂ ಕಿರಿಯ ನಡು ಕೊಬ್ಬಿದ ಪೆಗಲು ಪಿಡಿದ
ಕೂರಂಬು ದೀರ್ಘದನುವೆರಸಿ ನೆರೆದುದು ಕಾನ
ನಾರಿಗಳೆನಿಪ್ಪ ಶಬರಾಧಿಪರು ಕಟ್ಟೋಗೆಯ ಶಾಂತಿ ಸಭೆಯಂ ಮುಸುಕಲು''
(ಹ.ಕಾ.ಸ್ಥ. 5–2)

ಬಾಹ್ಯದ [illegible] ಮೈವೆತ್ತಿರುವ ಬೇಡಪಡೆಯು ಅಂತರಂಗದಲ್ಲಿ ಎಲ್ಲಾ ದೇವತೆಗಳ ಸದ್ಗುಣಗಳನ್ನು [illegible]ಳವಿಸಿಕೊಂಡವರಂತೆ ರಾಘವಾಂಕನು ಬೇ[illegible]ಪಡೆಯನ್ನು ಚಿತ್ರಿಸಿದ್ದಾನೆ. ಬೇಡರು [illegible] ವೇಷವನ್ನು ಧರಿಸಿದವರು, ದೇವತೆಗಳಂತೆ ವಿಶೇಷವಾಗಿ ಭೋಗಿಸುವವರು, ಚಂದ್ರನಂತೆ ದೋಷಿಗಳು, ಯಮಧರ್ಮನಂತೆ ನಾಶವಿ[illegible]ರು, ರಾವಣನಂತೆ ದೇವತೆಗಳ ಶತ್ರುಗಳೆಂದು... ಎನಿಸಿಕೊಂಡ ಕಿರಾತರು ಹರಿಶ್ಚಂದ್ರನ ಓಲಗದಲ್ಲಿ ಸೇರಿದರು. (ಹ.ಕಾ.ಸ್ಥ.5–4)

ರಾಜರ ಗುರುಹಿರಿಯರ ದರ್ಶನಕ್ಕೆ ಹೋಗಬೇಕಾದರೆ ಬರಿಗೈಯಿಂದ ಹೋಗುವುದು ಸುಸಂಸ್ಕೃತ ಲಕ್ಷಣವಲ್ಲ ಎನ್ನುವುದು ಹಿಂದುಗಳ [illegible]. [illegible]ಡಪಡೆಯು ಕಾಡುಜನವಾದರೂ ಸುಸಂಸ್ಕೃತರಾಗಿದ್ದುದರಿಂದ ಹರಿಶ್ಚಂದ್ರ ರಾಜನ ದರ್ಶನಕ್ಕೆ ಹೋಗಬೇಕಾದರೆ ಕಾಣಿಕೆಗಳನ್ನು ಕೊಂಡೊಯ್ಯುತ್ತಿದ್ದರೆಂಬುದು ಈ ಕೆಳಗಿನ ಪದ್ಯದಿಂದ ತಿಳಿದು ಬರುತ್ತದೆ.

'ಯೊಂಗಿ [illegible]ಳಂ, ಬೆಳೆದ ಸಾ
ರಂಗದೆಳವರಿಯ ನೆ[illegible] ತೊಡೆಯನುಗ್ರಮಾ
ತಂ[illegible]ತಂಗಳಂ ಚ[illegible] ಜೇನಳಿಗೆಯಂ ಪೀಲಿಪೊರೆಯ
ಸಂ[illegible]ಂ [illegible]ವ್ಯಾಘ್ರಚರ್ಮಮಂ ಕೊಲ್ಲೆಡ ಶಾ
ಬಂಗಳಂ ಪೂತಿಬೆಕ್ಕಂ ಹರಿಶ[illegible] ರಾ
ಯಂಗೆ ಕಾಣಿಕೆಯನಿತ್ತಡಿಗೆ[illegible]ತಿರ್ದರಗ್ಗದ ಬೇಡವೆಡೆಯರು.
(ಹ.ಕಾ.ಸ್ಥ.5–3)

ವ್ಯಕ್ತಿಯ [illegible], ವ್ಯಕ್ತಿ [illegible] ತನ್ನ ಕ್ಷೇತ್ರದಲ್ಲಿ ಗೈಯುವಂತಹ ಸಾಧನೆಯಿಂದ

ಆತನ ಸ್ಥಾನವನ್ನು ಗುರುತಿಸಲಾಗುತ್ತದೆ. ಅಂತೆಯೇ ಬೇಟೆಗಾರರಿಗೆ ಬೇಟೆಯ ಅವಧಿಯಲ್ಲಿ ಅವರ ಮೈಮೇಲೆ ಕಾಡುಮೃಗಗಳಿಂದ ಉಂಟಾದ ಗಾಯಗಳು ಅವರ ಧೀಮಂತತೆಗೆ ಸಾಕ್ಷಿಯಾಗಿವೆ. "ಮದದಾನೆ ತಿವಿದು ಗಾಯಗಳುಳ್ಳ, ಹುಲಿ ಹೊಡೆದು ಕುಗ್ಗಿದ ಭುಜಗಳುಳ್ಳ ಗಂಢಭೇರುಂಡನು ಮೇಲೆರಗಿ ಆದ ಗಂಟುಗಳುಳ್ಳ, ಸಿಂಹಗಳು ಉಗಿದು ಬಗಿದು ತೋಡಿದ ಸಂದುಗಳುಳ್ಳ.........." (ಹ.ಕಾ.ಸ್ಥ.5-5) ಮೊದಲಾದ ಪ್ರಾಣಿಗಳ ಜೊತೆಗೆ ಹೋರಾಡಿದ್ದಕ್ಕೆ ಸಾಕ್ಷಿಯಾಗಿ ಗಾಯಗಳ ಕಲೆಗಳು ಬೇಡಪಡೆಯು ತಮ್ಮ ವಿವಿಧ ಬೇಟೆ ಪ್ರಾಣಿಗಳ ಜೊತೆಗೆ ಹರಿಶ್ಚಂದ್ರನ ಓಲಗದಲ್ಲಿ ನೇರುತ್ತಾರೆ. ಅಲ್ಲಿಂದ ರಾಜನ ಜೊತೆಗೂಡಿ ಅಡವಿಗೆ ಬೇಟೆಯಾಡಲು ಹೋಗುತ್ತಾರೆ.

ಬೇಡಪಡೆಯು ತಮ್ಮ ಜೊತೆಯಲ್ಲಿಯೇ ಬೇಡತಿಯರನ್ನು ಅಡವಿಗ ಕರೆದುಕೊಂಡು ಹೋಗುತ್ತಿದ್ದರು. ರಾಘವಾಂಕನು ಬೇಡತಿಯರ ವೇಷ-ಭೂಷಣ, ಅವರು ಕಿವಿಯಲ್ಲಿ ಹಾಕತಕ್ಕ ಓಲೆಗಳು, ಅವರ ಆಹಾರ, ಅವರು ಬಳಸತಕ್ಕ ಒರಳುಕಲ್ಲು ಹಾಗು ದಂತದ ಒನಕೆ, ಅವರು ತಮ್ಮ ಪತಿಯಂದಿರಿಗೆ ಉಪಚರಿಸತಕ್ಕ ರೀತಿ ಮುಂತಾದವುಗಳನ್ನು ವಿವರವಾಗಿ ವಿವರಿಸುವುದನ್ನು ನೋಡಿದರೆ ಬೇಡರ ಜೀವನವನ್ನು ಬಹು ಸಮೀಪದಿಂದ ಬಲ್ಲವನಾಗಿದ್ದಾನೆಂದು ತಿಳಿಯುತ್ತದೆ. ಬೇಡತಿಯರು ನವಿಲುಗರಿಯನ್ನು ನಡುವಿಗೆ ಸುತ್ತಿಕೊಳ್ಳುತ್ತಿದ್ದರು. ಚಿಗುರಿನ ಸೆರಗಿನಿಂದಾಗಲೀ, ಸುವರ್ಣಮೃಗದ ಚರ್ಮದ ರವಿಕೆಯಿಂದಾಗಲಿ ಎದೆಯನ್ನು ಮುಚ್ಚಿಕೊಳ್ಳುತ್ತಿದ್ದರು. ಗರುಡನ ಗರಿಯಿಂದ ತಲೆಯನ್ನು ಅಲಂಕರಿಸಿಕೊಳ್ಳುತ್ತಿದ್ದರು. ಮುತ್ತಿನ ಹಾರಗಳನ್ನು ಹಾಗು ಗುಲಜಿಯ ಆಭರಣಗಳನ್ನು ಧರಿಸುತ್ತಿದ್ದರು. ಕೇದಗೆಯ ಹೂವಿನ ಎಸಳನ್ನು ಓಲೆಯನ್ನಾಗಿ ಮಾಡಿ ಇಟ್ಟುಕೊಳ್ಳುತ್ತಿದ್ದರು" (ಹ.ಕಾ.ಸ್ಥ. 5. ಪ.33 ಮತ್ತು 42) ಬೇಡತಿಯರು ಬೇಟೆಯಾಡತಕ್ಕ ವೇಳೆಯಲ್ಲಿ ಕಾಡುಮೃಗಗಳಿಂದ ಉಂಟಾದ ಹಲವು ಗಾಯಗಳುಳ್ಳ ಬೇಡರನ್ನು ಮರದ ತಂಪಾದ ನೆಳಲಿನಲ್ಲಿ ಮಲಗಿಸಿಕೊಂಡು ಉಪಚರಿಸುತ್ತಿದ್ದರು. "ಬೇಟೆಯಾಡಿ ಬಂದಂಥ ಬೇಡರಿಗೆ ಬಿದಿರ ಅಕ್ಕಿಯಿಂದ ಮಾಡಿದ ಅನ್ನ, ಮಾಂಸಕ್ಕೆ ಸಾಂಬರ ಹಾಕಿ ಬೇಯಿಸಿ ಉಣಬಡಿಸುತ್ತಿದ್ದರು. ಬೇಡರ ಜೊತೆಗೆ ಬೇಟೆಯಾಡಲು ಹೋಗುತ್ತಿದ್ದರು. ಬೇಡತಿಯರು ಹೊಂಚು ಹಾಕಿ ಹೊಂಚಿನ ಸ್ಥಳಗಳಲ್ಲಿ ಅಡಗಿ ಕುಳಿತು ಓಡುತ್ತಿದ್ದ ಸಾಧುಪ್ರಾಣಿಗಳಾದ ಜಿಂಕೆಗಳಿಗೆ ಬಾಣವನ್ನು ಬಿಡುತ್ತಿದ್ದರಲ್ಲದೆ ಶರಭದ ಬಲವುಳ್ಳ ಅತ್ಯಂತ ರೌದ್ರಕೋಪದಿಂದ ಗುರುಗುಟ್ಟುತ್ತ ಬರುತ್ತಿರುವ ವನದುರ್ಗಿಯ ಮಹಿಷಾಸುರನಂತಿರುವ ಕಾಡುಕೋಣವನ್ನೂ ಕೊಲ್ಲುತ್ತಿದ್ದರು. (ಹ.ಕಾ.ಸ್ಥ. ಪ.34, 39, 41) ಬೇಡತಿಯರು ಕೇವಲ ತಮ್ಮ ಅಡಿಗೆಯ, ಅಲಂಕಾರದ ಕೆಲಸ, ಪತಿಯನ್ನು ಉಪಚರಿಸುವುದರಲ್ಲಿಯೇ [illegible] ಸಾಧುಪ್ರಾಣಿಗಳಾದ ಜಿಂಕೆಗಳನ್ನು ಅಡಗಿ ಕೊಲ್ಲುವುದರ ಜೊತೆಗೆ ಭಯಂಕರ ಪ್ರಾಣಿಗಳನ್ನು ಮುಖಾಮುಖಿಯಾಗಿ ಎದುರಿಸುವಷ್ಟು ನಿಪುಣೆಯರಾಗಿದ್ದರು. ಧೈರ್ಯಶಾಲಿಗ[illegible]ರು ಎಂದು ಹರಿಶ್ಚಂದ್ರಕಾವ್ಯದಿಂದ ತಿಳಿದು ಬರುತ್ತದೆ.

ಬೇಟೆಯ ಪರಿಕರಗಳು:

ಬೇಡಪಡೆಯು ತಮ್ಮ ಜೊತೆಯಲ್ಲಿ ಬೇಟೆ ನಾಯಿಗಳನ್ನು, ಬಗೆಬಗೆಯ ಬಲೆಗಳನ್ನು ದೀಯದ ಖಗ ಮೃಗಗಳನ್ನು ಹಾಗು ಆಯುಧಗಳನ್ನು ಒಯ್ಯುತ್ತಿದ್ದರು.

ಬೇಟೆಯ ನಾಯಿಗಳು:

ಬೇಟೆಗೆ ಹೊರಡುವಾಗ ನರಿ, ಮೊಲ, ಕರಡಿ, ತೋಳ, ಜಿಂಕೆ, ಸೂಕರ ಮೊದಲಾದ ಪ್ರಾಣಿಗಳನ್ನು ಹಿಡಿಯುವ ವಿವಿಧ ಬಗೆಯ ಬೇಟೆನಾಯಿಗಳನ್ನು ಶಬರರು ತಮ್ಮೊಂದಿಗೆ ಕರೆದೊಯ್ಯುತ್ತಿದ್ದರು. ಸಾಹಸಿಗಳಾದ ಬೇಟೆಗಾರರು ತಮ್ಮ ವ್ಯಕ್ತಿತ್ವಕ್ಕೆ ತಕ್ಕಂತೆ ಬೇಟೆನಾಯಿಗಳನ್ನು ಸಾಕಿದ್ದರೆಂದು ರಾಘವಾಂಕನು ಈ ಕೆಳಗಿನ ಪದ್ಯದಲ್ಲಿ ಹೇಳಿದ್ದಾನೆ.

"ಹರಿಣದಲ್ಲಣನೆಂಬ ಹುಲಿಬಾಕನೆಂಬ ಸೂ
ಕರ ಮೃತ್ಯುವೆಂಬ ಸಾರಂಗಮರ್ದನನೆಂಬ
ಮರೆಮಾರಿಯೆಂಬ ಕಾಳ್ಕೋಣಕಂಟಕನೆಂಬ ಭಲ್ಲೂಕಮಲ್ಲನೆಂಬ
ಕರಿಸಿಂಹನೆಂಬ ಸಿಂಹಪ್ರಕರಶರಭನೆಂ
ಬರಿ ಶರಭ ಭೇರುಂಡ ನೆಂದೆಂಬ ಪರಿ ಪರಿಯ
ಬಿರುದುಳಿವ ಬಾವುಲಿಯ ಕುನ್ನಿಗಳು ನೆರೆದವಂದವನೀಶನೋಲಗದೊಳು"
(ಹ.ಕಾ.ಸ್ಥ.5-6)

"ಕಡವೆಗತ್ಯಸ್ವಾದಿಯೆಂಬ ನರಿ ಮೊಲಗಳಿಗೆ
ದಡಿಪೊಯಿಲನೆಂಬ ಕರಡಿಯ ಗಂಡನೆಂಬ ಬಿ
ಚ್ಚಡೆ ತೋಳಜಜ್ಝರನೆಂಬ ನರಿದನಿಹಿಯೆಂದೆಂಬ ಕುನ್ನಿಗಳಾನಾಯುಂ
ಗಡಣದಿಂ"............ .... (ಹ.ಕಾ.ಸ್ಥ.5-7)

ಮೇಲ್ಕಾಣಿಸಿದ ಬಿರುದಾಂಕಿತ ನಾಯಿಗಳ ಸಮೂಹದಲ್ಲಿಯೇ ಕೆಲವನ್ನಾಯುಂ ಬೇಡಪಡೆಯು ಬೇಟೆಗಾಗಿ ಕರೆದೊಯ್ಯುದರೆಂದರೆ ಆ ಬೇಟೆನಾಯಿಗಳ ನೈಪುಣ್ಯವನ್ನು ವರ್ಣಿಸಲಸದಳ.

ಬೇಟೆಯ ಬಲೆಗಳು:

ಪ್ರಾಣಿಗಳನ್ನು ನೆರೆಹಿಡಿಯಲು ಬೇಡಪಡೆಯು ನಾನಾ ರೀತಿಯ ಬಲೆಗಳನ್ನು ಬಳಸುತ್ತಿದ್ದರೆಂದು ಹರಿಶ್ಚಂದ್ರಕಾವ್ಯದಲ್ಲಿ ಉಲ್ಲೇಖಗೊಂಡಿರುವುದನ್ನು ಕಾಣಬಹುದು.

"ತಡಿಕೆವಲೆ ತಟ್ಟುವಲೆ ಹಾಸುವಲೆ ಬೀಸುವಲೆ
ಕೊಡತಿವಲೆ ಕೊಲುವಲೆ ತಳ್ಳುವಲೆ ಬಳ್ಳುವಲೆ
ತೊಡಕುವಲೆ ತೋರುವಲೆ ತೊಟ್ಟುವಲೆ ಗೂಟವಲೆ ಕಣ್ಣವಲೆ ಕಾಲುವಲೆಯ
ಸಿಡಿವಲೆವಲೆ ಸಿಲುಕುವಲೆ ಹಾರುವಲೆ ಜಾರುವಲೆ
ಬಡಿಗೆವಲೆ ಬಾಚುವಲೆ ಗಾಢವಲೆ ಗೂಢವಲೆ
ಮಡಿಕೆವಲೆ ಮಂದಣಿನವಲೆಯ ಹೊರೆಗಳ ಬೇಡಪಡೆ ನೆರೆದುದೇನೆಂಬೆನು"
(ಹ.ಕಾ.ಸ್ಥ.5-8)

1) ತಡಿಕೆವಲೆ
2) ತಟ್ಟುವಲೆ
3) ಹಾಸುವಲೆ
4) ಬೀಸುವಲೆ
5) ಕೊಡತಿವಲೆ
6) ಕೋಲುವಲೆ
7) ತಳ್ಳವಲೆ
8) ಬಳ್ಳವಲೆ
8) ತೊಡಕುವಲೆ
10) ತೋಲುವಲೆ
11) ತೊಟ್ಟುವಲೆ
12) ಗೂಟವಲೆ
13) ಕಣ್ಣೆವಲೆ
14) ಕಾಲುವಲೆ
15) ಸಿಡಿವಲೆ
16) ಸಿಲುಕುವಲೆ
17) ಹಾರುವಲೆ
18) ಜಾರುವಲೆ
19) ಬಡಿಗೆವಲೆ
20) ಬಾಚುವಲೆ
21) ಗಾಢವಲೆ
22) ಗೂಢವಲೆ
23) ಮಡಿಕೆವಲೆ
24) ಮಂದಸಿನ ವಲೆ

ಈ ರೀತಿಯಾಗಿ ರಾಘವಾಂಕನು ಅಂದು ಬಳಕೆಯಲ್ಲಿದ್ದ ಬಲೆಗಳನ್ನು ಹೆಸರಿಸಿದ್ದಾನೆ. ಪ್ರಾಣಿಗಳನ್ನು ಹಿಡಿಯಲು ಬುಟ್ಟಿ, ಬಿಲ್ಲು, ಬಾಣ, ಬೆಳ್ಳಾರಪಟ, ಮೃಗ ಳನ್ನು ಹಿಡಿಯುವ ಬಲೆ, ಪಕ್ಷಿಗಳಾಗಿ ಹರಡುವ ಬಲೆ, ಬೀಸುವ ಕಣ್ಣುಗಳು, ಗುಗ್ಗರಿ, ಅರಳು ಮೊದಲಾದ ಖಾದ್ಯವಸ್ತುಗಳು, ಪಕ್ಷಿ-ಪಕ್ಷಿಗಳನ್ನು ಹಿಡಿಯುವ ಬುಟ್ಟಿ ಮೊದಲಾದವುಗಳನ್ನು ಬೇಟೆಗಾರರು ಬಳಸುತ್ತಿದ್ದರು.
(ಹ.ಕಾ.ಸ್ಥ.5–9)

<u>ಆಯುಧಗಳು</u>:

ಕೊಡತಿ(ಮರದ ಸುತ್ತಿಗೆ) ಸುರಗಿ (ಸಣ್ಣಕತ್ತಿ), ಕರವತಿಗೆ(ಗರಗಸ) ದಂಡೆಕೈ, ಕತ್ತಿ, ಒಡಿಕೋಲು, ಸಬಳ, ತ್ರಿಶೂಲ, ಸುರಗಿ, ಚಕ್ರ, ಮುದ್ಗರ, ಸೆಲ್ಲೆಹ, ಕೊಂತ, ಕಕ್ಕಡೆ, ಪ್ರಬಲಗದೆ ಮೊದಲಾದ ಆಯುಧ ಸಾಮಗ್ರಿಗಳನ್ನು ಬೇಟೆಯಾಡುತ್ತಕ್ಕ ಸಮಯದಲ್ಲಿ ಉಪಯೋಗಿಸುತ್ತಿದ್ದರು.
(ಹ.ಕಾ.ಸ್ಥ.5–9, 10)

ದೀಹದ ಖಗ ಹಾಗು ಮೃಗಗಳು:

ಅನ್ಯ ಪ್ರಾಣಿ-ಪಕ್ಷಿಗಳನ್ನು ಆಕರ್ಷಣೆಗೊಳಗಾಗುವಂತೆ ತರಬೇತುಗೊಳಿಸಲಾದ ಪ್ರಾಣಿ ಪಕ್ಷಿಗಳಿಗೆ 'ದೀಹ' ದ ಪ್ರಾಣಿಗಳೆಂದು ಕರೆಯಲಾಗುವುದು. ಪಕ್ಷಿಗಳನ್ನು ನೆರೆಹಿಡಿಯಲು 'ಸಾಳುವ'ಗಳನ್ನು ಬಳಸುತ್ತಿದ್ದರು; ಕಾಡುಪ್ರಾಣಿಗಳನ್ನು ಬೇಟೆಯಾಡಲು ಸಾಮಾನ್ಯವಾಗಿ ಹುಲಿ, ಶರಭ, ಭೇರುಂಡ, ಸಿಂಹ ಹಾಗೂ ತೋರೆತ್ತುಗಳನ್ನು ಬಳಸುತ್ತಿದ್ದರು. (ಹ.ಕಾ.ಸ್ಥ.5-9)

ಈ ರೀತಿಯಾಗಿ ರಾಘವಾಂಕನು ಹರಿಶ್ಚಂದ್ರಕಾವ್ಯದಲ್ಲಿ ಅಂದು ಬಳಕೆಯಲ್ಲಿದ್ದ ಬೇಟೆಯ ಪರಿಕರಗಳನ್ನು ವಿವರವಾಗಿ ತಿಳಿಸಿದ್ದಾನೆ.

ಬೇಟೆಯಾಡುವ ಪದ್ಧತಿ:

ರಾಘವಾಂಕನು ಬೇಟೆಯಾಡುವ ವಿಧಾನವನ್ನು ಕೂಲಂಕಷವಾಗಿ ವರ್ಣಿಸಿರುವುದನ್ನು ಗಮನಿಸಿದರೆ ಸ್ವತಃ ರಾಘವಾಂಕನೇ ಬೇಟೆಯಾಡುವಿಕೆಯಲ್ಲಿ ಪರಿಣತನಾಗಿದ್ದ ಎನ್ನಿಸುತ್ತದೆ. "ಕೆಲವೆಡೆ ಬೇಟೆಯ ವರ್ಣನೆಯು ಸಂಪ್ರದಾಯದ ಜಾಡಿನಲ್ಲಿ ಸಾಗಿದ್ದರೂ ಬೇಟೆಯಾಡತಕ್ಕ ಪದ್ಧತಿಗಳನ್ನು, ಗೋರಿ ವೇಲಂಟೆ, ಹಾಗು ಪಕ್ಷಿ ಬೇಟೆಯನ್ನಾಡುವುದನ್ನು ಹೇಳತಕ್ಕ ಪದ್ಯಗಳಲ್ಲಿ ರಾಘವಾಂಕನು ಉತ್ತಮ ಬೇಟೆಯ ಚಿತ್ರಗಳನ್ನು ಮೂಡಿಸಿದ್ದಾನೆ." (ಶಿವಕುಮಾರ:1979:23) ಪ್ರಾಣಿಗಳ ಉಗುರು, ತುಪ್ಪಳ, ಪ್ರಾಣಿಗಳ ನೊರೆ (ಉಗುಳಿದ)ಗಳ ಗುರುತುಗಳನ್ನು ನೋಡುತ್ತ, ಅವುಗಳ ಹೆಜ್ಜೆಯ ಗುರುತನ್ನು ಹಿಡಿದು, ಅವುಗಳ ಧ್ವನಿಯನ್ನು ಆಲಿಸುತ್ತ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. (ಹ.ಕಾ.ಸ್ಥ.5-20) ಹಳ್ಳವನ್ನು ತೋಡಿ ಪ್ರಾಣಿಗಳು ಓಡುತ್ತ ಬಂದು ಹಳ್ಳದಲ್ಲಿ ಬೀಳುವ ಹಾಗೆ, ಶಸ್ತ್ರ ತಂದಿರತಕ್ಕ ತಡಿಕೆಗೆ ಅಂಬನ್ನು ಹಚ್ಚುವುದರ ಮೂಲಕ, ಕಾಡಿಗೆ ಬೆಂಕಿಯನ್ನು ಹಚ್ಚುವುದರ ಮೂಲಕ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. (ಹ.ಕಾ.ಸ್ಥ.5-25) ಬೇಡಪಡೆಯು ಪ್ರಾಣಿಗಳ ಚಲನವಲನಗಳನ್ನು ಎಷ್ಟು ಸೂಕ್ಷ್ಮವಾಗಿ ಗಮನಿಸುತ್ತಿದ್ದರೆಂದು ಈ ಕೆಳಗಿನ ಪದ್ಯದಿಂದ ತಿಳಿಯುತ್ತದೆ. "ಹರಿಶ್ಚಂದ್ರ ಕಾವ್ಯದಲ್ಲಿ ಬರುವ ಬೇಟೆಯ ವರ್ಣನೆಯನ್ನು ಗಮನಿಸಿದರೆ ನಮಗೆ ಆತನ ಸೌಂದರ್ಯೋಪಾಸನೆ, ಸಹಜ ವರ್ಣನೆ, ಸ್ಫೂರ್ತಿ ಸೂಕ್ಷ್ಮದೃಷ್ಟಿಗಳ ಕಲ್ಪನೆಯಾಗುವುದು.

"ಎರಳೆ ಸರಳಿಸಿ ಹೋದುದಲ್ಲಿ ಹಿಂಗಾಲೂದೆದು
ತೆರಳ್ದು ಮಣ್ಣದೆ ಸೊಕ್ಕಿದೆಕ್ಕಲಂಗಳು ಹೋದ
ವೆರಡು ಕಟವಾಯಿಂದ ಸುರಿದ ನೊರೆಯಿದೆ ಕರಡಿ ತಣಿವಾಡಿ ಪೋದುದಲ್ಲಿ
ನೆರೆದಿಹಗಳ ಹೊರೆಯೊಳೋಡೆದ ಹುತ್ತಿದೆ ಹುಲಿಯು
ಮರೆಯನೆಳೆಯುತ್ತಿಲ್ಲಿ ಬಸಿನೆತ್ತರಿದುದೆಂ
ದರದೆರಗಿ ಹೆಜ್ಜೆಯಂ ನೋಡಿ ಬೆಂಬಳಿವಿಡಿದು ಹರಿವ ಲುಬ್ಧಕರೆಸೆದರು".

(ಹ.ಕಾ.ಸ್ಥ.5-26)

ಎಂದು ನಮ್ಮನ್ನು ಕರೆದುಕೊಂಡು ಹೋಗಿ ಬೇಟೆಯ ಸೂಕ್ಷ್ಮ ಚಿಹ್ನೆಗಳನ್ನು ತೋರುತ್ತಾನೆ. (ಹಿರೇಮಠ:1966:225) ಹೀಗೆ ಬೇಡಪಡೆಯು ಈಕ್ಷಣ ದೃಷ್ಟಿಯುಳ್ಳವರಾಗಿ ಬೇಟೆಯಾಡುವ ವರ್ಣನೆಯನ್ನು ರಾಘವಾಂಕನು ನಿರುಪಮವಾಗಿ ಮಾಡಿದ್ದಾನೆ.

ಬೇಡಪಡೆಯು ಹಲವಾರು ರೀತಿಯಿಂದ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. ಕೆಲವೊಮ್ಮೆ ಕಾಡುಮೃಗಗಳು ಅವರ ಸಾಹಸ ಹಾಗು ಪರಿಣತಿಗೆ ಸವಾಲಾಗಿ ನಿಲ್ಲುತ್ತಿದ್ದವು. ಅಂತಹ ವೇಳೆಯಲ್ಲಿ ಅವರು ನಿರುತ್ಸಾಹಗೊಳ್ಳದೆ ಕಾಡಿನ ಒಡೆಯನನ್ನು ಬೇಡರ ಒಡೆಯನನ್ನು ಪ್ರಾರ್ಥಿಸುತ್ತಿದ್ದ ವಿಷಯ ಹರಿಶ್ಚಂದ್ರಕಾವ್ಯದಿಂದ ತಿಳಿದು ಬರುತ್ತದೆ. ತಮ್ಮ ಶಕ್ತಿಸಾಹಸಕ್ಕೂ ಮೀರಿದ ದೈವವೊಂದಿದ್ದು ಅವರ ಪ್ರಾರ್ಥನೆಯಿಂದ ತಮ್ಮ ಕೆಲಸಗಳು ಸುಗಮಗೊಳ್ಳುತ್ತವೆ ಎಂಬ ನಂಬಿಕೆ ಆ ಬೇಡರಿಗೆ ಇತ್ತೆನ್ನುವುದು ಇದರಿಂದ ವಿದಿತವಾಗುತ್ತದೆ.

<u>ಬೇಟೆಯ ಪ್ರಕಾರಗಳು</u>:

ರಾಘವಾಂಕನು ಹರಿಶ್ಚಂದ್ರಕಾವ್ಯದಲ್ಲಿ ಅಂದು ಪ್ರಚಲಿತವಿದ್ದ ಎಂಟು ಪ್ರಕಾರದ ಬೇಟೆಯ ಹೆಸರುಗಳನ್ನು ಈ ಕೆಳಗಿನ ಪದ್ಯದಲ್ಲಿ ತಿಳಿಸಿರುವನು.

"........... ಗೋರಿ
ವೇಂಟೆ ಪಳಹರವೇಂಟೆ ಪಟವೇಂಟೆ ವಿದ್ಯಾಧರರ ಬೇಂಟೆ ಚಿತ್ರವೇಂಟೆ
ಅಂಟುಜಲವೇಂಟೆ ತೋಹಿನಬೇಂಟೆ ಘನಸೋಹು
ವೇಂಟೆಗಳೆನಿಪ್ಪ ಹೆಸರಂ ಹೊತ್ತು ಮೆರೆಯುತಿ
ಪ್ಪೆಂಟು ತೆರದುಚಿತವೇಂಟೆಯನಾಡಿದಂ ಹರಿಶ್ಚಂದ್ರವಸುದಾಧೀಶನು"
(ಹ.ಕಾ.ಸ್ಥ.5-49)

ಆ ಬೇಂಟೆಯ ಹೆಸರುಗಳು ಇಂತಿವೆ:

1) ಗೋರಿವೇಂಟೆ
2) ಪಳಹರ ವೇಂಟೆ
3) ವಿದ್ಯಾಧರವೇಂಟೆ
4) ಪಟವೇಂಟೆ
5) ಚಿತ್ರವೇಂಟೆ
6) ಅಂಟುಜಲವೇಂಟೆ
7) ತೋಹಿನಬೇಂಟೆ
8) ಘನಸೋಹುವೇಂಟೆ

ಈ ರೀತಿಯಾಗಿ ಎಂಟು ಪ್ರಕಾರದ ಬೇಟೆಯನ್ನು ಹೇಳಿ ಅವುಗಳಲ್ಲಿ ಗೋರಿವೇಂಟೆ, ಜಲವೇಂಟೆ ಹಾಗು ತೋಹಿನ(ವಂಚನೆಯಿಂದ ಹೊಂಚು ಹಾಕಿ ಬೇಟೆಯಾಡುವ)ಬೇಟೆಗಳನ್ನು ಕುರಿತು ವಿವರಗಳನ್ನು ನೀಡುತ್ತಾನೆ.

1) <u>ಗೋರಿಬೇಟೆ</u>:

'ಗೋರಿ' ಎಂದರೆ ಪ್ರಾಣಿಗಳನ್ನು ಆಕರ್ಷಿಸುವ ಹಾಡು. ಅದರ ಹೆಸರೆ ಸೂಚಿಸುವಂತೆ ಸುಂದರವಾದ ರಾಗಗಳನ್ನು ಹಾಡುತ್ತ ಎರಳೆಗಳನ್ನು ಆಕರ್ಷಿಸಿ ಅವುಗಳನ್ನು ಸೆರೆಹಿಡಿಯುತಕ್ಕ ಬೇಟೆಯ ಒಂದು ಪ್ರಕಾರ. ಹರಿಶ್ಚಂದ್ರಕಾವ್ಯದಲ್ಲಿ ರಾಘವಾಂಕನು ಗೋರಿಬೇಟೆಯ ವರ್ಣನೆಯನ್ನು ಈ ರೀತಿ ಮಾಡುವನು.

''......... ರಾಗರಸದ
ಸೊಗಸನಪ್ಪಿದ ಚಿತ್ತವಳ್ಳಿರಿವ ಜನದ ಬೊ
ಬ್ಬೆ ಬೆದರುತಿಪ್ಪ ಮನ ಬೆರಸಿ ಮರುಳಾಗಿ ಗೋ
ರಿಗೆ ಸಿಕ್ಕಿದೆರಲೆಗಳನಕಟಕಟ ನಿಷ್ಠುರಿಣಲುಬ್ಧಕರು ಕೆಡೆಯೆಚ್ಚರು.
(ಹ.ಕಾ.ಸ್ಥ.5-27)

ಪಕ್ಷಿಗಳನ್ನು ಸೆರೆಹಿಡಿಯಲು ಬೇಡ ಪಡೆಯು ಲಾವುಗೆ, ಹರಡೆ, ಗೌಜು, ಚಿಟ್ಟಬ್ಬೆ, ಕೋಕಿಲ, ತುರುವೆಗಳು, ಹಂಸೆ, ರಾಗಧರ ಎಂಬ ಪಕ್ಷಿಗಳ ಧ್ವನಿಯಲ್ಲಿಯೇ ಕರೆದು ಆ ಪಕ್ಷಿ ಸಮೂಹವನ್ನು ಸೆರೆಹಿಡಿಯುತ್ತಿದ್ದರು.
(ಹ.ಕಾ.ಸ್ಥ.5-43)

2) <u>ಜಲಬೇಟೆ</u>:

ಜಲಬೇಟೆ ಎಂಬುದು ಜಲಚರಪ್ರಾಣಿಗಳನ್ನು ಬೇಟೆಯಾಡತಕ್ಕ ವಿಧಾನ. ಜಲಚರಪ್ರಾಣಿಗಳನ್ನು ಇಂಗೂಳಿ, ಹೆಗ್ಗೂಳಿ, ಕಿರುಗೂಳಿ ಎಂಬ ಮೂರು ರೀತಿಯ ಗಾಳಗಳಿಂದ, ಗುಪ್ಪಬಲೆಗಳಿಂದ ಹಲವು ಜಾಲಗಳಿಂದ, ಉದ್ದಧಾರ ಬಿಗಿದ ಸಿಲುಕಂಬಿನಿಂದ, ಸೊಗಡು ಗೂಳುಗಳಿಂದ (ಮೀನು ಹಿಡಿಯುವ ವಾಸನೆಯುಳ್ಳ ಬುಟ್ಟಿ) ಮದ್ದುಗಳ ಮುಸಕದಿಂದ ( ಆಹಾರದಲ್ಲಿ ಬೆರಸಿಕೊಡುವ ಒಂದು ಬಗೆಯ ಮಂದವಾದ ವಿಷ) ನದಿ ನದಾಳಿಗಳಲ್ಲಿ ಮೀನುಗಳನ್ನು ಸೆರೆಹಿಡಿಯುತ್ತಿದ್ದರು. (ಹ.ಕಾ.ಸ್ಥ.5-44)

3) <u>ತೋಹಿನ ಬೇಟೆ</u>:

ತೋಹಿನ ಬೇಟೆ ಎಂದರೆ ಎದುರಾಳಿ ಪ್ರಾಣಿಗೆ ತಾನಿರುವ ಸ್ಥಳದ ಸುಳುಹನ್ನು ತೋರಿಸದೆ ಅವುಗಳನ್ನು ಬೇಟೆಯಾಡತಕ್ಕ ರೀತಿ. ಅಂದರೆ ಹೊಂಚು ಹಾಕಿ ಬೇಟೆಯಾಡತಕ್ಕ ವಿಧಾನ. ಹುಲಿಗಳನ್ನು ಬೇಟೆನಾಯಿಗಳಂತೆ ಬೇಟೆಯ ಸಲುವಾಗಿ ಸಾಕಿ ಉಪಯೋಗಿಸುತ್ತಿದ್ದರೆಂದು ಈ ಹಿಂದೆ ಹೇಳಲಾಗಿದೆ. ಅಂತಹ ಹುಲಿಯೊಂದು ಹೊಂಚು ಹಾಕಿ ಜಿಂಕೆಗಳನ್ನು ಬೇಟೆಯಾಡತಕ್ಕ ದೃಶ್ಯವು ಕಣ್ಮುಂದೆ ಕಟ್ಟುವಂತೆ ರಾಘವಾಂಕನು ಈ ಕೆಳಗಿನ ಪದ್ಯದಲ್ಲಿ ಚಿತ್ರಿಸಿದ್ದಾನೆ.

''........ ಬಂಡಿಯಿಂದಿಳಿದ ಹುಲಿಯು
ಹಾರಯಿಸಿ ತಲೆದಡವಿ ತೋರಿ ಹಾಸು ವ ತಿವಿದು
ದೂರದಿಂ ಕಂಡು ಹೆಸರಿಸಿ ಹತ್ತಿ ಹಣುಗಿ ನೆಲ
ಕೋಲೆಯಡಗಿ ತನ್ನನುವಿನಳವಿಗೆ ಜುಣುಗಿ ನಡೆದು ಬಳಿಕೇಗೈದುದು

''ಕುಸಿದ ತಲೆ ಹಣುಗಿದೊಡಲ್ ಅರಳ್ದ ಬಾಯ್, ಸುಗಿದ ಕಿವಿ,
ಉಸಿರಡಿದ ಮೂಗು ಮರೆದು ಎಲೆ ಇಕ್ಕದ ಉಂಗುಟಂ
ಬಸುರೊಳಡಗಿದ ಬೆನ್ನು, ನಿಮಿರ್ದಕೊರಳ್ ಅಡಿಗಡಿಗೆ ಗಜಬಜಿಸುತಿಹ ಮುಂದಡಿ
ಎಸೆಯೆ ಲಂಘಿಸಿ ನೆಲನನೊದೆದು ಪುಟನೆಗೆದು ಗ
ರ್ಜಿಸುತ ಬರೆ ಹೆದರಿ ಕಂಗೆಟ್ಟು ಡೆಂಢಣಿಸಿ ಸರ
ಳಿಸುವ ಹರಿಣಂಗಳಂ ಮೋದಿ ಮುರಿದಟ್ಟಿ ಕೆಡಹಿದುವು ದೀಹದ ಹುಲಿಗಳು''
(ಹ.ಕಾ.ಸ್ಥ.5– 30, 31)

ಈ ರೀತಿಯಾಗಿ ಹುಲಿಗಳು ಪ್ರಾಣಿಗಳನ್ನು ಹೊಂಚಿ ಹಿಡಿಯುವುದನ್ನು ಕವಿಯು ಎದೆ ಬಾಯಿಗೆ ಬರುವಂತೆ ಬಣ್ಣಿಸಿದ್ದಾನೆ. ಓದುಗರು ಕೂಡ ಅರೆಕ್ಷಣ ಉಸಿರಡಿದು, ಕಣ್ಣರಳಿಸಿ, ಮುಂದೇನಾಗುವುದೆಂದು ಕುತೂಹಲದಿಂದ ವೀಕ್ಷಿಸುವಂತೆ ಚಿತ್ರಿಸಿದ್ದಾನೆ.

ನಿಜವಾದ ಬೇಟೆಯ ಭೀಕರತೆ ಕಂಡು ಬರುವುದು ಮಾಯಾ ವರಾಹವನ್ನು ಬೇಟೆಯಾಡುವಲ್ಲಿ. ವಿಶ್ವಾಮಿತ್ರ ಮುನಿಯಿಂದ ಸೃಷ್ಟಿಸಲ್ಪಟ್ಟ ಮಾಯಾ ವರಾಹವನ್ನು ಕೊಲ್ಲುವುದು ಅಷ್ಟು ಸುಲಭ ವಲ್ಲ. 'ಸಿಡಿಲ ಕಿಡಿಯಂತೆ ಕೋರೈಸುವ ಕಣ್ಣುಗಳ, ಬ್ರಹ್ಮಾಸ್ತ್ರದ ಎರಡು ತುಂಡನ್ನು ತುರುಕಿದ ರೀತಿಯಲ್ಲಿ ಉದ್ದವಾದ ಕೋರೆಹಲ್ಲುಗಳ..... ಕೋಪಗೊಂಡ ಯಮನಕೋಣವು ಹಂದಿಯ ವೇಷವನ್ನು ಪಡೆಯಿತೋ ಎನ್ನುವಂತೆ ಇರುವ (ಹ.ಕಾ.ಸ್ಥ.6–4) ಹಂದಿಯನ್ನು ಕೊಲ್ಲಲು ಬೇಡಪಡೆಗಾಗಲಿಲ್ಲ. ಆದರೆ ಆ ವರಾಹವೇ ಬೇಟೆನಾಯಿಗಳನ್ನು ಸಾಹಸಿಗಳಾದ ಬೇಡರನ್ನು ಕೊಂದಿತು. ಸಮಸ್ತ ಬೇಡರ ಪಡೆಯು ಆಯುಧಗಳಿಂದ ಅದನ್ನು ಮುತ್ತಲು, ವರಾಹವು ಶಬರಪಡೆಯನ್ನು ಬಲವಾಗಿ ತಿವಿದು, ಸೀಳುತ್ತ, ಬಾಳೆವನದಲ್ಲಿ ಕಠಾರಿಯು ಬಂಡಿ ಓಡಿದಂತೆ ಆ ಬೇಡಪಡೆಯನ್ನು ಹಿಂದಕ್ಕೆ ನೂಕಿತು. ಇಂತಹ ವರಾಹವನ್ನು ಕೊಲ್ಲಲು ಸ್ವತ: ಹರಿಶ್ಚಂದ್ರರಾಜನೇ ಬರಬೇಕಾಯಿತು. ಹರಿಶ್ಚಂದ್ರರಾಜನನ್ನು ಸಾಕಷ್ಟು ಸತಾಯಿಸಿದ ನಂತರ ಆತನ ಬಾಣಕ್ಕೆ ತುತ್ತಾಗಿ ಪ್ರಾಣತೆತ್ತಿತು.

ಈ ರೀತಿಯಾಗಿ ಬೇಟೆಯ ವರ್ಣನೆ ಕೇವಲ ಸಾಂಪ್ರದಾಯಿಕವೂ ಕವಿಸಮಯಾನುಸಾರಿಯೂ ಆಗಿರದೆ ಕಾವ್ಯದ ವಸ್ತುವಿಗೆ ಹೊಂದಿಕೊಂಡು ಮನೋಜ್ಞವಾಗಿ ಮೂಡಿ ಬಂದಿದೆ. ಇಲ್ಲಿ ವ್ಯಕ್ತವಾಗಿರುವ ಕವಿಯ ಪ್ರತಿಭಾಶಕ್ತಿಯನ್ನು ಅಳೆಯಲು ಸಾಧ್ಯವಿಲ್ಲವೆಂದೇ ಹೇಳಬಹುದು. ''ಕವಿಯು ಬೇಟೆಯ ವರ್ಣನೆಯನ್ನು ನಿರುಪಮವಾಗಿ ಮಾಡಿದ್ದಾನೆ. ಅದು ಎಷ್ಟು ಸ್ವಾಭಾವಿಕವಾಗಿದೆಯೆಂದರೆ ನಾವೂ ಬೇಡರ ಉದ್ವೇಗ ಉತ್ಸಾಹಗಳಲ್ಲಿ ಭಾಗಿಯಾಗಿ ಹಾರಾಡುತ್ತೇವೆ. ಹಂದಿಯ ಬೇಟೆಯನ್ನು ವರ್ಣಿಸುವ ಸಹಜತೆಯನ್ನು ನೋಡಿದರೆ ಅವನು ಅದನ್ನು ತಾನೇ ನೋಡಿದ್ದನೆಂದು ತೋರುತ್ತದೆ.'' (ಕುವೆಂಪು:1955:88) ''ಹರಿಶ್ಚಂದ್ರಕಾವ್ಯದಲ್ಲಿ ಬೇಟೆಯ ವರ್ಣನೆಗೆ ಕಲ್ಪಿಸಿಕೊಂಡಿರುವ ಸನ್ನಿವೇಶ ಎಷ್ಟು ಸಹಜವಾಗಿದೆಯೋ ಅಷ್ಟೇ ಸಹಜವಾಗಿದೆ ರಾಘವಾಂಕನ ಬೇಟೆಯ ಚಿತ್ರಣ. ಕನ್ನಡ ಸಾಹಿತ್ಯ

ದಲ್ಲಿಯೇ ಇಷ್ಟೊಂದು ಉತ್ತಮ 'ಬೇಟೆಯ ವರ್ಣನೆ' ಮತ್ತೆಲ್ಲಿಯೂ ಕಂಡು ಬರುವುದಿಲ್ಲ. ಸ್ವತಃ ಕವಿ ಬೇಟೆಯ ಅನುಭವವನ್ನು ಪಡೆಯದಿದ್ದರೆ ಈ ಬಗೆಯ ಸಹಜ ಚಿತ್ರಗಳನ್ನು ಅ ನಿರ್ಮಿಸಲು ಸಾಧ್ಯವೇ? ಎಂದು ಯೋಚಿಸುವಂತಾಗುತ್ತದೆ...

(ಮರುಳಸಿದ್ದಪ್ಪ :1967:19)

) ತೊತ್ತುಗಳು:

"ಗುಲಾಮ ಪದ್ಧತಿ ಅಥವಾ ಮನುಷ್ಯರನ್ನು ತೊತ್ತುಗಳನ್ನಾಗಿಸಿಕೊಳ್ಳುವ ರೂಢಿ ಭಾರತದಲ್ಲಿ ತುಂಬ ಹಿಂದಿನಿಂದಲೂ ಪ್ರಚಲಿತವಾಗಿದೆ. ವೇದಕಾಲದಲ್ಲಿ ಈ ಪದ್ಧತಿ ಸಾಕಷ್ಟು ಆಳವಾಗಿಯೇ ರೂಢಿಯಲ್ಲಿದ್ದಿತೆಂಬುದಕ್ಕೆ ಬೇಕಾದಷ್ಟು ಮಾಹಿತಿ ದೊರಕುತ್ತದೆ. 'ದಾಸ' ಎಂದು ಅನೇಕ ಬಾರಿ ವೇದಗಳಲ್ಲಿ ಉಕ್ತವಾಗಿರುವ ಶಬ್ದವು ಮೊದಮೊದಲು ಆರ್ಯೇತರ ಜನಾಂಗವನ್ನು ಸೂಚಿಸುತ್ತಿದ್ದಿತಾದರೂ, ಕೆಲ ಕಾಲಾನಂತರ ಅದು ಆರ್ಯರು ಗೆದ್ದು ತಮ್ಮ ಅಡಿಯಾಳಾಗಿಸಿಕೊಂಡ ಜನರನ್ನು ಸೂಚಿಸುತ್ತಿತ್ತು. ಹೀಗೆ ಯುದ್ಧದಲ್ಲಿ ಗೆಲ್ಲುವ ಮೂಲಕ ಗುಲಾಮರನ್ನಾಗಿಸಿಕೊಳ್ಳುತ್ತಿದ್ದ ಪದ್ಧತಿ ಬರುಬರುತ್ತಾ ಆರ್ಥಿಕ ಕಾರಣಗಳಿಗಾಗಿ ಬೇರೂರಿತು."

(ನಾರಾಯಣ ಪಿ.ವಿ.:1982:80)

ರಾಘವಾಂಕನ ಕಾಲದಲ್ಲಿಯೂ ಈ ತೊತ್ತು ಪದ್ಧತಿ ಇತ್ತೆನ್ನುವುದಕ್ಕೆ ಹರಿಶ್ಚಂದ್ರ ಕಾವ್ಯದಲ್ಲಿ ಅನೇಕ ಉಲ್ಲೇಖಗಳು ಸಿಗುವವು. ಸಾಮಾನ್ಯವಾಗಿ ಒಡೆಯನಲ್ಲಿ ತೆಗೆದುಕೊಂಡ ಸಾಲವನ್ನು ತೀರಿಸಲಾರದೆ ಅವಂಗೆ ತೊತ್ತುಗಳಾಗುತ್ತಿದ್ದರು. ಹರಿಶ್ಚಂದ್ರಕಾವ್ಯದಲ್ಲಿ ಹರಿಶ್ಚಂದ್ರನು ಮುನಿಗೆ ಕೊಡಬೇಕಾದ ಋಣವನ್ನು ತೀರಿಸಲಿಕ್ಕಾಗದೆ ಚಂದ್ರಮತಿ ಹಾಗು ಲೋಹಿತಾಶ್ವನನ್ನು ಮಾರಿ ತೊತ್ತಾಗಿಸುತ್ತಾನೆ. (ಹ.ಕಾ.ಸ್ಥ.11-29) ಅಷ್ಟೇ ಅಲ್ಲ ಕೊನೆಗೆ ತನ್ನನ್ನು ಮಾರಿಕೊಂಡು ವೀರಬಾಹುಕನ ತೊತ್ತಾಗುತ್ತಾನೆ. '(ಹ.ಕಾ.ಸ್ಥ.11-24)

ತೊತ್ತುಗಳ ಮಾರಾಟ ಪದ್ಧತಿ:

ತೊತ್ತುಗಳನ್ನು ಸಂತೆಗಳಲ್ಲಿ ಮಾರುತ್ತಿದ್ದ ವಿಷಯವು ಶಾಸನೋಕ್ತವಾಗಿದೆ. (ಚಿದಾನಂದಮೂರ್ತಿ ಎಂ.:1985:378) ಹೀಗೆ ಮಾರಾಟ ಮಾಡತಕ್ಕ ಸಮಯದಲ್ಲಿ ತೊತ್ತುಗಳ ತಲೆಯ ಮೇಲೆ ಹುಲ್ಲನ್ನಿಟ್ಟು ಅವರ ಮಾರಾಟಕ್ಕಿರುವವರು ಎನ್ನುವುದನ್ನು ಸೂಚಿಸುತ್ತಿದ್ದರು.

"ಪೊಡವಿಪಂ ಸತಿಸುತರ ತಲೆಗಳಲಿ ಹುಲುಗಟ್ಟಿ
ನಡೆನಡೆದು ಕೈವಿಡಿದು ಮುಂದಿರ್ದು ತೋರುತಂ
ಗಡಿಗಳೊಳು ಬೀದಿಯೊಳು ಸಂದಿಯೊಳು ಪುರದೊಳಿರ್ಕೆಲದಂತೆ"
(ಹ.ಕಾ.ಸ್ಥ.11-5)

ಇವರನ್ನು ಕೊಳ್ಳಲು ಬಂದ ವಿಪ್ರನು, ಮಾರುಕಟ್ಟೆಯಲ್ಲಿ ತಮಗೆ ಬೇಕಾದ ಸಾಮಾನನ್ನು ಬೆಲೆಕಟ್ಟಿ ಕೊಳ್ಳುವಂತೆ ಹೆಂಗಸಿಗೆ ಇಪ್ಪತ್ತು ಸಾವಿರ, ಮಗನಿಗೆ ಇಪ್ಪತ್ತು ಸಾವಿರ ಎಂದು ಬೆಲೆಕಟ್ಟಿ ಕೊಂಡುಕೊಂಡನು. (ಹ.ಕಾ.ಸ್ಥ.11-7)

ತೊತ್ತುಗಳನ್ನು ನಡೆಸಿಕೊಳ್ಳುತ್ತಿದ್ದ ರೀತಿ:

ಹಣ ತೆತ್ತು ಕೊಂಡುಕೊಂಡಂತಹ ತೊತ್ತುಗಳನ್ನು ಬಹಳ ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದರು. ಒಡೆಯನು ಹೇಳಿದ ಎಲ್ಲ ಕೆಲಸಗಳನ್ನು ಎದುರಾಡದೆ ತೊತ್ತು ಮಾಡಬೇಕಾಗುತ್ತಿತ್ತು. ಮತ್ತೆ ಅವರಿಂದ ಬೈಗುಳ, ಒದೆತ, ತಿವಿತ ಮುಂತಾದವುಗಳನ್ನು ಅನುಭವಿಸಬೇಕಾಗುತ್ತಿತ್ತು. ಕೊಂಡು ಕೊಂಡ ಒಡೆಯನು ಮುಂದಿರುವಾಗ ಅನ್ಯರೊಡನೆ ಮಾತನಾಡುವುದೂ ಒಂದು ಅಪರಾಧವೇ ಅನಿಸುತ್ತಿತ್ತು. ಲೋಹಿತಾಶ್ವನು ತನ್ನ ತಂದೆಗೆ ಹೋಗಿ ಬರುತ್ತೇನೆ" ಎಂದು ಹೇಳುತ್ತಿರುವಾಗ ಅವನನ್ನು ಕೊಂಡಂತಹ ವಿಪ್ರನ ವರ್ತನೆ ಎಂತಹ ಅಮಾನವೀಯವಾಗಿದೆ ನೋಡಿರಿ....

"ಬೇಹೊಡೆಯ ನಾನಿರಲು ಮಾರಿದವನಂ ಕೇಳ್ವ
ಸಾಹಸವ ನೋಡೆಂದು ಕೆಡೆಹೊಯ್ದು ನೂಕಿ ನಿಜ
ಗೇಹಕ್ಕೆ ಜರೆಯುತ್ತ ಕೊಂಡೊಯ್ದನ......." (ಹ.ಕಾ.ಸ್ಥ.11-11)

ಹೆಣ್ಣು ತೊತ್ತಾದವಳು, ಒಡೆಯರ ಮನೆಗೆ ನೀರು ತರುವುದು, ಕಸಗುಡಿಸುವುದು, ಹಾಲು ಹಿಂಡುವುದು, ಒಡೆಯನ ಕಾಲು ತೊಳೆಯುವುದು ಮೊದಲಾದ ಕಾರ್ಯಗಳನ್ನು, ಚಿಕ್ಕಮಕ್ಕಳಾದರೆ ಅಡವಿಗೆ ಹೋಗಿ 'ಹುಲುಹುಳ್ಳಿ'ಯನ್ನು ತರುವ ಕಾರ್ಯವನ್ನು ಮಾಡಬೇಕಾಗುತ್ತಿತ್ತು. (ಹ.ಕಾ.ಸ್ಥ. 12-45) ಈ ಎಲ್ಲ ಕೆಲಸಗಳನ್ನು ಚಂದ್ರಮತಿ, ಲೋಹಿತಾಶ್ವ ಮಾಡಿದರೂ ಕೂಡ ಒಡೆಯನ ಮನೆಯಲ್ಲಿ ಅವರು ಎಂತಹ ನರಕಯಾತನೆಯನ್ನು ಅನುಭವಿಸುತ್ತಿದ್ದರೆಂಬುದನ್ನು ಇಲ್ಲಿ ಕೆಳಗಿನ ಪದ್ಯದಲ್ಲಿ ಕವಿ ಚಿತ್ರಿಸಿದ್ದಾನೆ.

"ಅಡಿಗಡಿಗೆ ಕೋಪಿಸುವ ಸಾಯೆ ಸದೆಬಡಿವ ಕಾ
ಳ್ಗೆಡೆವ ಕರಕರಿಪ ಸೆಣಸುವ ತಪ್ಪಸಾಧಿಸುವ
ಕಡೆಯೊಡೆಯ ಮಾರಿಗಾರಗೆ ಸತ್ತು ಹುಟ್ಟುತಿಹರವನಿಪನ ಸತಿಪುತ್ರರು"
(ಹ.ಕಾ.ಸ್ಥ.11-3)

ಈ ರೀತಿಯಾಗಿ ಸತ್ತು ಸತ್ತು ಬದುಕುತ್ತಿರುವ ಅವನಿಪನ ಸತಿ-ಸುತರ ಚಿತ್ರಣದಲ್ಲಿ ರಾಘವಾಂಕನ ಸಮಕಾಲೀನ ತೊತ್ತುಗಳ ಜೀವನ ಚಿತ್ರಣವಿದೆ, ಅವರ ಬದುಕಿನ ನರಕಯಾತನೆಯ ಚಿತ್ರಣವಿದೆ.

ತೊತ್ತುಗಳ ಕಷ್ಟಸುಖ ಒಡೆಯರಿಗೆ ಬೇಕಾಗಿಲ್ಲ. ಅವರ ಜೀವಕ್ಕೆ ಗಂಡಾಂತರ ಬಂದೊದಗಿದರೂ ಕೂಡ ಒಡೆಯನ ಮನೆಯಲ್ಲಿ ಮಾಡತಕ್ಕ ಕೆಲಸಗಳನ್ನು ಮಾಡಲೇಬೇಕು. ಲೋಹಿತಾಶ್ವನಿಗೆ ಹಾವು ಕಚ್ಚಿದೆ ಎಂಬ ವಿಷಯ ತಿಳಿದ ಚಂದ್ರಮತಿ ಒಡೆಯನಿಗೆ ತನ್ನ ಮಗನನ್ನು ಹುಡುಕಿಸಲು ಕೇಳಿಕೊಂಡಳು. ಆಗ ಅರ್ಧರಾತ್ರಿಯಲ್ಲಿ ಸೇವಕರು ಇರುವುದಿಲ್ಲ ನಿದ್ರೆ ಮಾಡಲು ತಿಳಿಸಿದನು. ತಾನಾದರೂ ಹೋಗಿ ಹುಡುಕಿಕೊಂಡು ಬರುತ್ತೇನೆಂದ ಚಂದ್ರಮತಿಗೆ ಮನೆಯ ಕೆಲಸವನ್ನೆಲ್ಲ ಪೂರೈಸಿಕೊಂಡು ಹೋಗಲು ತಿಳಿಸುವನು. (ಹ.ಕಾ.ಸ್ಥ.12-19, 20) ಈ ರೀತಿಯಾಗಿ ಅವರ ಕಷ್ಟಗಳಿಗೆ

ಯಾವ ಬೆಲೆಯನ್ನು ಕೊಡುತ್ತಿರಲಿಲ್ಲ. ಅವರನ್ನು ಮನುಷ್ಯರೆಂದೇ ಅವರು ಪರಿಗಣಿಸರು.

ಗಂಡು ತೊತ್ತಾದವನು, ಅವನ ಮನಸ್ಸಿಗೆ ವಿರುದ್ಧವೆನಿಸಿದರೂ ಕೂಡ ಒಡೆಯನ ಹೇಳಿಕೆಯ ಮೇರೆಗೆ ವಧೆ ಮೊದಲಾದ ಹೀನ ಕಾರ್ಯಗಳನ್ನು ಮಾಡಬೇಕಾಗುವುದು. ಹರಿಶ್ಚಂದ್ರನು ವೀರ ಬಾಹುಕನ ಆಜ್ಞೆಯ ಮೇರೆಗೆ ಚಂದ್ರಮತಿಯ ವಧೆ ಮಾಡುವುದು ಅನಿವಾರ್ಯವಾಗಿತ್ತು.

(ಹ.ಕಾ.ಸ್ಥ.13–12)

ಹೀಗೆ ರಾಘವಾಂಕನು ತನ್ನ ಸಮಕಾಲೀನದಲ್ಲಿದ್ದ ತೊತ್ತುಗಳ ಮಾರಾಟ ಪದ್ಧತಿ ಅವರ ನರಕ ಯಾತನೆಯ ಬದುಕನ್ನು ಚಿತ್ರಿಸಿದ್ದಾನೆ.

ಆಕರ ಗ್ರಂಥಗಳು:


1) ಅನಂತರಂಗಾಚಾರ್.ಎನ್.1984 : ಭಾರತೀಯ ತೀರ್ಥ ಕಲಾ ಕ್ಷೇತ್ರ ಸಂದರ್ಶನೀ, ಸ್ವಚ್ಛಂದಂ ಪ್ರಕಾಶನ, ಮೈಸೂರು.

2) ಹಿರೇಮಠ ಆರ್.ಸಿ. :1966: ಮಹಾಕವಿ ರಾಘವಾಂಕ: ಶಾರದಾ ಮಂದಿರ ಮೈಸೂರು.

3) ತಿಪ್ಪೇರುದ್ರಸ್ವಾಮಿ.ಎಚ್. :1976: ಮಹಾಕವಿ ರಾಘವಾಂಕ: ಡಿ.ವಿ.ಕೆ.ಮೂರ್ತಿ, ಮೈಸೂರು.

4) ಶಿವರುದ್ರಪ್ಪ.ಜಿ.ಎಸ್. :1982: ಅನುರಣನ: ವಾಗ್ದೇವಿ ಪುಸ್ತಕಗಳು, ಮೈಸೂರು.

5) ಸೂರ್ಯನಾರಾಯಣ ಎಲ್.ವಿ. :1988: ರಾಘವಾಂಕ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

6) ವೆಂಕಟರಾಮಾಚಾರ್ಯ ಕೆ. :1957: ರಾಘವಾಂಕನ ಕೃತಿರತ್ನ: ಕನ್ನಡ ನುಡಿ ಕನ್ನಡ ಸಾಹಿತ್ಯಪರಿಷತ್ತು, ಬೆಂಗಳೂರು.

7) ನಾಗೇಗೌಡ ಎಚ್.ಎಲ್. :1966: 'ಅಬ್ದುರ್ ರಜಾಕ್', ಪ್ರವಾಸಿ ಕಂಡ ಇಂಡಿಯಾ ಸಂಪುಟ-ಭಾಗ-೨ (ಕೆ.ವಿ.ಪುಟ್ಟಪ್ಪ) ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ.

8) ಶಾಂತಿನಾಥ ದಿಬ್ಬದ್ :1982: ಪಂಪಭಾರತ ಒಂದು ಸಾಂಸ್ಕೃತಿಕ ಅಧ್ಯಯನ: (ಅಪ್ರಕಟಿತ ಮಹಾಪ್ರಬಂಧ) ಕ.ವಿ.ವಿ. ಧಾರವಾಡ.

9) ಶಿವರುದ್ರಪ್ಪ ಜಿ.ಎಸ್ :1982: ಅನುರಣನ: ವಾಗ್ದೇವಿ ಪುಸ್ತಕಗಳು, ಮೈಸೂರು.

10) ಶಿವಕುಮಾರ್ ಕೆ.ವೈ. :1979: 'ರಾಘವಾಂಕನ ಹರಿಶ್ಚಂದ್ರಕಾವ್ಯ' (ಗದ್ಯಾನುವಾದ): ಪ್ರೀತಿ ಪ್ರಕಾಶನ, ಮೈಸೂರು.

11) ಹಿರೇಮಠ.ಆರ್.ಸಿ. :1966: ಮಹಾಕವಿ ರಾಘವಾಂಕ: ಶಾರದಾ ಮಂದಿರ, ಮೈಸೂರು.

12) ಕುವೆಂಪು :1955: ಕಾವ್ಯ ವಿಹಾರ: ಉದಯರವಿ, ಮೈಸೂರು.

13) ಮರುಳಸಿದ್ದಪ್ಪ ಕೆ. :1957: ಷಟ್ಪದಿ ಸಾಹಿತ್ಯ: ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

14) ನಾರಾಯಣ.ಪಿ.ವಿ. :1982: ವಚನ ಪ್ರಸಂಗ: ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು.

15) ನಾರಾಯಣ ಪಿ.ವಿ. :1983: ವಚನ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ, ವೀರಶೈವ ಅಧ್ಯಯನ ಸಂಸ್ಥೆ, ಗದಗ.

16) ಚಿದಾನಂದಮೂರ್ತಿ ಎಂ.:1985: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.

ಅಡಿಟಿಪ್ಪಣಿಗಳು :


1) ಬಸವಾರಾಧ್ಯ ಎನ್; ಬಸಪ್ಪ ಎಸ್ :1969: ಹರಿಶ್ಚಂದ್ರ ಕಾವ್ಯ : ಸ್ಥಲ 8–50

2) ಬಸವರಾಧ್ಯ ಎನ್; ಬಸಪ್ಪ ಎಸ್ :1969: ಹರಿಶ್ಚಂದ್ರ ಕಾವ್ಯ : ಸ್ಥಲ 4–3

3) ಬಸವರಾಧ್ಯ ಎನ್; ಬಸಪ್ಪ ಎಸ್ :1969: ಹರಿಶ್ಚಂದ್ರ ಕಾವ್ಯ : ಸ್ಥಲ 8–50
ಶಾರದಾ ಮಂದಿರ; ಮೈಸೂರು.

4) ರಾಘವಾಂಕ :1969: ಹರಿಶ್ಚಂದ್ರ ಕಾವ್ಯ : ಸಂ: ಎನ್.ಬಸವರಾಧ್ಯ ಮತ್ತು ಎನ್.ಬಸಪ್ಪ.
ಶಾರದಾ ಮಂದಿರ ಮೈಸೂರು.

# ರಾಜಕೀಯ ವ್ಯವಸ್ಥೆ

ಮಾನವನ ವ್ಯವಸ್ಥಿತ ಸಾಂಘಿಕಜೀವನವೇ ಆಡಳಿತ ವ್ಯವಸ್ಥೆಗೆ ಕಾರಣವಾಯಿತೆನ್ನಬಹುದು. ಕುಟುಂಬದ ವ್ಯವಸ್ಥೆಯ ಆಧಾರದ ಮೇಲೆ ಒಂದು ರಾಜ್ಯದ ಆಡಳಿತ ವ್ಯವಸ್ಥೆ ರೂಪುಗೊಂಡಿದೆ. ಈ ಕುಟುಂಬ ಅಧಿಕಾರ ಹಂಚಿಕೆಯ ಪದ್ಧತಿಯು ಊರು ಹಾಗು ದೇಶಗಳ ಆಡಳಿತ ವ್ಯವಸ್ಥೆಯಲ್ಲಿ ವಿಸ್ತರಿಸಿದೆ. ಪ್ರಾಚೀನ ಕಾಲದಿಂದ ಇಂದಿನವರೆಗೆ ಆಡಳಿತ ಪದ್ಧತಿಯಲ್ಲಿ ಅಲ್ಪಸ್ವಲ್ಪ ಬದಲಾವಣೆ ಆಗಿರಬಹುದೆ ಹೊರತು ಆಮೂಲಾಗ್ರವಾಗಿ ಇಲ್ಲ. ರಾಘವಾಂಕನ ಹರಿಶ್ಚಂದ್ರಕಾವ್ಯದಲ್ಲಿ ಅಂದಿನ ರಾಜಕೀಯ ವ್ಯವಸ್ಥೆಯನ್ನು ಸೂಚಿಸುವ ಕೆಲವು ಸಂಗತಿಗಳನ್ನು ಈ ಅಧ್ಯಾಯದಲ್ಲಿ ನೋಡಲಾಗಿದೆ. ರಾಜಕೀಯ ವ್ಯವಸ್ಥೆಯನ್ನು ಮುಖ್ಯವಾಗಿ 3 ವಿಭಾಗವಾಗಿ ವಿಂಗಡಿಸಿಕೊಳ್ಳಲಾಗಿದೆ.

1) ಶಾಸಕಾಂಗ
2) ಕಾರ್ಯಾಂಗ
3) ನ್ಯಾಯಾಂಗ

## ಅ) ಶಾಸಕಾಂಗ:

ಈ ವಿಭಾಗದಲ್ಲಿ ರಾಜ, ರಾಜತ್ವ ಹಾಗು ರಾಜಪರಿವಾರ, ಆಡಳಿತ ಸಲಹಾ ಮಂಡಳಿ—ಮಂತ್ರಿ ಈ ವಿಷಯಗಳನ್ನು ಕುರಿತು ವಿವೇಚಿಸಲಾಗಿದೆ.

### ರಾಜ, ರಾಜತ್ವ:

ಒಂದು ಭೂ ಪ್ರದೇಶಕ್ಕೆ ಒಡೆಯನಾದವನನ್ನು ರಾಜ ಎಂದು ಕರೆಯುವ ರೂಢಿಯಿದೆ.

"ಪ್ರಾಚೀನ ವೇದಕಾಲದಲ್ಲಿ ರಾಜತ್ವವು ಆನುವಂಶಿಕವಾದುದೂ ಆಗಿರಲಿಲ್ಲ, ಒಬ್ಬನ ಜೀವನಪರ್ಯಂತ ಎಂಬುದೂ ಆಗಿರಲಿಲ್ಲ. ರಾಜನ ಅಧಿಕಾರ ಸದಾ ಅನಿಶ್ಚಿತವಾಗಿರುತ್ತಿತ್ತು. ಆದರೆ ವಚನಕಾರರ ಕಾಲದಲ್ಲಿ ಈ ಆನುವಂಶಿಕ ರಾಜತ್ವ ಅತ್ಯಂತ ಸಹಜವಾದುದು ಎನ್ನುವಷ್ಟು ಆಳವಾಗಿದ್ದಿತು. ಅಲ್ಲದೆ ರಾಜನೆಂದರೆ ದೈವದ ಪ್ರತಿನಿಧಿಯೆಂಬ ಭಾವನೆ ಕೂಡ ರೂಢಮೂಲವಾಗಿತ್ತು." (
(ನಾರಾಯಣ.:1983:204)

ಕರ್ನಾಟಕವನ್ನು ಆಳಿದ ಹಲವಾರು ರಾಜವಂಶದ ಚರಿತ್ರೆಯ ಅಧ್ಯಯನದಿಂದ ಮೇಲಿನ ಹೇಳಿಕೆ ಸತ್ಯವೆನಿಸುತ್ತದೆ. "ರಾಜಾ ಕಾಲಸ್ಯ ಕಾರಣಂ" "ರಾಜಾ ಪ್ರತ್ಯಕ್ಷ ದೇವತಾ" ಎಂಬ ಮಾತು ಕೂಡ ಕನ್ನಡ ನಾಡಿನಲ್ಲಿ ಪ್ರಚಲಿತವಿದೆ.

ಹರಿಶ್ಚಂದ್ರಕಾವ್ಯದಲ್ಲಿ ಭೂಪತಿ ಹರಿಶ್ಚಂದ್ರನು ಲೋಹಿತಾಶ್ವನನ್ನು ಕುರಿತು ಆಡುವ

"......... . ನಿಮ್ಮಜ್ಜ ತ್ರಿಶಂಕುಭೂವರನಂದದಿ
ಸಕಲ ರಾಜ್ಯಕ್ಕೊಡೆಯನಾಗದಿರನೀ ಕುಮಾ
ರಕನೆಂಬ ನಂಬುಗೆಯುಲಾನಿರಲು ..........." (ಹ.ಕಾ.ಸ್ಥ.12-48)

"ಮುಂದೆ ನೀನಾಳಲಿಹ ಧರೆಯನ್ಯರಿಗಿತ್ತ
ನೆಂದು ನುಡಿಸೆಯೊ ........" (ಹ.ಕಾ.ಸ್ಥ.12-50)

ಎಂಬ ಮಾತುಗಳನ್ನು ಗಮನಿಸಿದಾಗ ರಾಘವಾಂಕನ ಕಾಲಕ್ಕೆ ರಾಜತ್ವ ಆನುವಂಶಿಕವಾಗಿತ್ತೆಂಬುದು ತಿಳಿಯುತ್ತದೆ.

ತಮ್ಮ ವ್ಯಕ್ತಿತ್ವವನ್ನು ಘನತೆಯನ್ನು ತಾವು ಹೇಳಿಕೊಂಡರೆ ಸಾಲದು. ಬೇರೆಯವರು ಗುರುತಿಸಿ ಅದನ್ನು ಪ್ರಶಂಸಿಸಿದರೆಅದಕ್ಕೆ ಬೆಲೆ. ಹರಿಶ್ಚಂದ್ರ ರಾಜನ ರಾಜ್ಯಾಡಳಿತ ವಿಧಾನ ಉತ್ತಮವಾಗಿತ್ತು. ಆತನು ಜನಪ್ರಿಯ ರಾಜನಾಗಿದ್ದನೆನ್ನುವುದು ಕೆಳಗಿನ ಪದ್ಯದಿಂದ ಧ್ವನಿತವಾಗುತ್ತದೆ.

"ಹಿಂದನಿತು ಕಾಲ ನೀಂ ಸಪ್ತದ್ವೀಪನಾಳುವಂದು ತೊಡಗೊಂಡು ಭಯಮಂ
ಎಂದುವುಂ ಕಾಣ್ಬೆವಾವೆಂದು" (ಹ.ಕಾ.ಸ್ಥ.3-67)

"ತರದ ಬಾಧೆಗಳಿಲ್ಲ ಬಿಟ್ಟಿಯೂಳಿಗವಿಲ್ಲ
ಪರನೃಪರ ಭಯವಿಲ್ಲ ಸಾಲದಂಡಲೆಯಿಲ್ಲ
ನೆರೆಯೂರ ಕದನವಿಲ್ಲೆನೆಂಬ್ಬದುಕಿತವ ......" (ಹ.ಕಾ.ಸ್ಥ.3-68)

ಎಂದು ಪ್ರಜೆಗಳು ಹರಿಶ್ಚಂದ್ರನ ರಾಜ್ಯಾಡಳಿತವನ್ನು ಮೆಚ್ಚಿ ನುಡಿಯುವರು. ಹರಿಶ್ಚಂದ್ರ ರಾಜನು ಸಪ್ತದ್ವೀಪಗಳ ಅಧಿಪತಿಯಾಗಿ ಅಧಿಕಾರ ಸೂತ್ರವನ್ನು ಕೈಗೆತ್ತಿಕೊಂಡಂದಿನಿಂದ ಇಲ್ಲಿಯವರೆಗೆ ಅಂದರೊಂದ್ಹೇಳಿ ಜನತೆ ಯಾವೊಂದು ಭಯವನ್ನು ಕಂಡವರಲ್ಲ. ಯುದ್ಧದ ಭಾಷೆಗಳಿಲ್ಲ. ಪರ

ಪರರಾಜರ ಭಯವಿಲ್ಲ ಎಂದು ಹೇಳುವಲ್ಲಿ ರಾಜನ ಧೈರ್ಯ ಸಾಹಸ ಆತನ ಸಾಮರ್ಥ್ಯವನ್ನು ಕೊಂಡಾಡುವರು. ಸಂಲದ ಭಯವಿಲ್ಲ ಎಂದು ಹೇಳುವಲ್ಲಿ ಹರಿಶ್ಚಂದ್ರನ ರಾಜ್ಯ ಮಳೆ–ಬೆಳೆಗಳಿಂದ ಸಮೃದ್ಧಿಯಿಂದೂ ಶ್ರೀಮಂತ ನಾಡಾಗಿತ್ತೆನ್ನುವುದು ಸ್ಪಷ್ಟವಾಗುತ್ತದೆ. ಹರಿಶ್ಚಂದ್ರರಾಜನು ಸಾಹಸ, ಶೌರ್ಯ, ಸಾಮರ್ಥ್ಯ, ದಕ್ಷತೆ ಮತ್ತು ಉತ್ತಮ ಆಚಾರಗಳಿಂದ ಜನಾನುರಾಗಿರಾಜನಾಗಿದ್ದನೆಂದು ವಿದಿತವಾಗುತ್ತದೆ.

ಹರಿಶ್ಚಂದ್ರ ಮತ್ತು ಪ್ರಜೆಗಳ ಸಂಬಂಧ ತಂದೆ–ಮಕ್ಕಳ ಸಂಬಂಧವಾಗಿತ್ತು. ರಾಜನಿಗೆ ತನ್ನ ಸಂತೋಷ ವೈಭವಕ್ಕಿಂತ ಪ್ರಜೆಗಳ ಹಿತರಕ್ಷಣೆಯೇ ಮುಖ್ಯವಾಗಿತ್ತು ಎಂಬುದನ್ನು ರಾಘವಾಂಕನು ಹರಿಶ್ಚಂದ್ರನ ವನವಿಹಾರದ ಉದಾಹರಣೆಯನ್ನು ಕೊಡುತ್ತ ಒಂದು ದೃಶ್ಯವನ್ನು ಕಣ್ಣಮುಂದೆ ತರುತ್ತಾನೆ. ರಾಜ, ತನ್ನ ಪ್ರಜೆಗಳು ರಕ್ಷಣೆಯಿಲ್ಲದೆ ಬಳಲುತ್ತಿದ್ದಾರೆಂದು ತಿಳಿದು ಅವರನ್ನು ಭೇಟಿಯಾಗಲು ಬಂದಂತ ಸಂದರ್ಭ. ಖಗಮೃಗಗಳ ಹಾವಳಿಯಿಂದ ಬೇಸತ್ತ ಜನ ರಾಜನನ್ನು ಭೇಟಿಯಾಗಲು ಬಂದು ಮೊರೆಯಿಡುವ ಸಂದರ್ಭದಲ್ಲಿ,

"ಅಂತವರ ಬಾಯ ಮೊರೆಯಂ ನಿಲಿಸಿ ಕಯ್ಯ ಹು
ಲ್ಲಂ ತೆಗೆದು ಬಿಸುಟು ಧನಧಾನ್ಯಂಗಳಂ ಕೊಟ್ಟು
ಸಂತವಿಟ್ಟು ಅಂಜದಿರಿ ನಾಳೆ ಪೊರಮಟ್ಟು ನಾಡೊಳಗುಳ್ಳ ಖಗಮೃಗವನು
ಅಂತಕನ ನಗರಕ್ಕೆ ಹೋಗಬಡವೆನೆಂದು ಭೂ
ಕಾಂತನೊಲವಿಂ..... ......" (ಹ.ಕಾ.ಸ್ಥ.3–69)

ಇಲ್ಲಿ ಬರುವ ಕಯ್ಯ ಹುಲ್ಲಂ ತೆಗೆದು ಬಿಸುಟು' ಎಂಬ ಪದ್ಯದ ಸಾಲಿನ ಅರ್ಥ ಏನಿರಬಹುದು? ತಮ್ಮ ಬರಗಾಲವನ್ನು ಬೆಳೆಗಳ ವಿನಾಶವನ್ನು ತಿಳಿಸುವ ಸಂಕೇತವಾಗಿ ಪ್ರಜೆಗಳು ಕೈಯಲ್ಲಿ ಹುಲ್ಲು ಹಿಡಿದು ತರುತ್ತಿರಬಹುದೆ? ಏಕೆಂದರೆ ಇದಕ್ಕಿಂತ ಮೊದಲ ಪದ್ಯದಲ್ಲಿ ಈ ಸಾಲುಗಳಿಗೆ ಪೂರಕವೆಂಬಂತೆ "ಖಗಮೃಗದ ಕಾಟದಿಂದ ಧರೆಯೊಳಗೆ ಬೆಳಸಿಲ್ಲ, ಬಿತ್ತಿಲ್ಲ, ನೀರಿಲ್ಲ' (ಹ.ಕಾ.ಸ್ಥ.3–68) ಎನ್ನುವಂಥ ಮಾತುಗಳು ಕಂಡು ಬರುತ್ತವೆ.

ನಮ್ಮಲ್ಲಿ ಇಂದಿಗೂ ಗುರುಹಿರಿಯರನ್ನು ಗಣ್ಯವ್ಯಕ್ತಿಗಳನ್ನು ಕಾಣಲು ಹೋಗುವಾಗ ಏನಾದರೂ ಕಾಣಿಕೆಯನ್ನು ಕೊಂಡೊಯ್ಯುವ ಸಂಪ್ರದಾಯವುಂಟು. ರಾಘವಾಂಕನು ಹರಿಶ್ಚಂದ್ರನನ್ನು ಕಾಣಲು ಬಂದ ಪ್ರಜೆಗಳು " ಲೇಸೆನಿಪ ವಸ್ತುವಂ ಕಾಣಿಕೆಯನಿತ್ತು" (ಹ.ಕಾ.ಸ್ಥ.3–66)ದುದಾಗಿ ತಿಳಿಸುತ್ತಾನೆ.

"ಹೀಗಿದ್ದಾಗ ಇದೇ ರಾಘವಾಂಕ 'ಕಯ್ಯ ಹುಲ್ಲಂ ತೆಗೆದು ಬಿಸುಟು' ಎಂಬ ವಾಕ್ಯವನ್ನು ಬರೆದುದರ ಅರ್ಥ, ಕಷ್ಟಗಳನ್ನು ಪರಿಹಾರ ಮಾಡುತ್ತೇನೆಂಬ ಭರವಸೆಯ ಅರ್ಥದಲ್ಲಿ ಅವರ ಕೈಯಲ್ಲಿರುವ ಹುಲ್ಲನ್ನು ತೆಗೆದು ಬಿಸುಡಬಹುದೇ? ಈ ಸಾಲಿನ ವಾಚ್ಯಾರ್ಥ ಇಷ್ಟೆ ಆಗಿರಬಹುದು

ಅಥವಾ ಇವಕ್ಕೆ ಇವರದೇ ಆದ ಜನಪದಿಯ ನೆಲೆಯಲ್ಲಿ ವಿಶೇಷ ಆಚರಣೆಯ ಅರ್ಥ ಇದ್ದರೂ ಇರಬಹುದೆಂದು ನನ್ನ ಅಭಿಪ್ರಾಯ.

ಪ್ರಜೆಗಳು ಕೂಡ ಅರಸನನ್ನು ತಮ್ಮ ತಂದೆಯೆಂದೇ ಭಾವಿಸಿ ಅವರ ಯೋಗಕ್ಷೇಮದ ಬಗ್ಗೆ ಚಿಂತಿಸುತ್ತಿದ್ದರು. ಮುನಿಗೆ ಸರ್ವರಾಜ್ಯವನ್ನು ಸಮರ್ಪಿಸಿ ಊರುಬಿಟ್ಟು ಹೊರಟಂಥ ರಾಜನನ್ನು ಕಂಡು ಮುಂದೆ ರಾಜನು ಅನುಭವಿಸತಕ್ಕ ಕಷ್ಟಗಳನ್ನು ನೆನೆದು ಅವುಗಳನ್ನು ನೀನು ಹೇಗೆ ಸೈರಿಸುತ್ತೀಯಾ ಎಂದು ಕೇಳುವರು.

''ದಂತಿಯಿಂದಿಳಿದು ನಡೆದರಿಯದವ ಬರುಗಾಲೊ
ಳೆಂತಡಿಯನಿಡುವೆ ಹಾಸಿನೊಳು ಪವಡಿಸುವಾತ
ನೆಂತು ಕಲ್ಲುನೆಲದೊಳೊರಗುವೆ ಸಿತಚ್ಛತ್ರ ತಂಪಿನೊಳು ಬಪ್ಪಾತ ನೀನು
ಎಂತು ಬರುಬಿಸಿಲನಾನುವೆ ಪುರದೊಳಿಪ್ಪಾತ
ನೆಂತರಣ್ಯದೊಳಿಪ್ಪೆ ಜನವನಗಲ್ದರಿಯದವ
ನೆಂತು ಪೇಳೇಕಾಕಿಯಾಗಿಪ್ಪೆ ಎಂದು ಮೊರೆಯಿಟ್ಟುದು ಸಮಸ್ತಜನವು''
(ಹಕಾಸ್ಥ 9-6)

ಹರಿಶ್ಚಂದ್ರನು ಅಡವಿಗೆ ಹೊರಟಂತಹ ಸಂದರ್ಭದಲ್ಲಿ ಪುರಜನರು ಹರಿಶ್ಚಂದ್ರನನ್ನು ಕುರಿತು ಹೇಳಿದ ಮಾತುಗಳು ರಾಘವಾಂಕನ ಕಾಲದಲ್ಲಿಯ ರಾಜರಲ್ಲಿದ್ದ ಸದ್ಗುಣಗಳಾಗಿರಬೇಕೆಂಬುದು ಈ ಕೆಳಗಿನ ಪದ್ಯದಿಂದ ವಿದಿತವಾಗುತ್ತದೆ.

''ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ
ಪರಿಜನದ ಭಾಗ್ಯವಡವಿಗೆ ನಡೆಯುತಿದೆ ಸಪ್ತ
ಶರಧಿ ಪರಿವೃತ ಧರೆಯ ಸಿರಿಯ ಸೊಬಗಜ್ಞಾತವಾಸಕ್ಕೆ ಪೋಗುತಿದೆಕೊ
ಎರೆವ ದೀನಾನಾಥರಾನಂದವಡಗುತಿದೆ
ವರಮುನೀಂದ್ರರ ಯಾಗರಕ್ಷೆ ಬಲವಳಿಯುತಿದೆ
ನಿರುತವೆಂದೊಂದಾಗಿ........'' (ಹ.ಕಾ.ಸ್ಥ.9-10)

ಹೀಗೆ ರಾಜನಾದವನು ಪುರಕ್ಕೆ ಪುಣ್ಯರೂಪವಾಗಿ, ಪರಿಜನಕ್ಕೆ ಭಾಗ್ಯವಾಗಿ ಧರೆಯ ಸಿರಿಯ ಸೊಬಗಾಗಿ ದೀನ ಅನಾಥರಿಗೆ ಆನಂದ ಕೊಡುವವನಾಗಿ, ಮುನೀಂದ್ರರ ಯಾಗಕ್ಕೆ ರಕ್ಷೆಯಾಗಿ ಇರಬೇಕು.

ಅರಸರು ಸ್ವಭಾವತಃ ಶೃಂಗಾರಪ್ರಿಯರೂ ನಿಸರ್ಗಪ್ರಿಯರೂ ಆಗಿರುತ್ತಿದ್ದರು. ಋತುಮಾನಗಳನ್ನನುಸರಿಸಿ ಒಂದೊಂದು ಮಾಸ ಪರ್ಯಂತ ಅರಸು ಪರಿವಾರ ಚತುರಂಗ ಬಲ ಸಮೇತರಾಗಿ ವನವಿಹಾರಕ್ಕೆಹೊರಟು ಸಂತೋಷಪಡುತ್ತಿದ್ದರು. (ಹ.ಕಾ.ಸ್ಥ.3- ಪ.16-61) ರಸಿಕರಾಗಿರುತ್ತ ಅರಸರು ಪ್ರಸಂಗಾವಧಾನವಾಗಿ ರಾತ್ರಿಯಲ್ಲಿ ವೇಶ್ಯಾವಾಟಿಕೆಯನ್ನು ಪ್ರವೇಶಿಸಿ ಅಲ್ಲಿಯ ರಸ ನಿಮಿಷಗಳನ್ನು ಅನುಭವಿಸುತ್ತಿದ್ದರು. (ಹ.ಕಾ.ಸ್ಥ.4- ಪ.4-51)

ಅರಸರು ತಾವು ನಂಬಿದ ಮೌಲ್ಯಗಳ ರಕ್ಷಣೆಗಾಗಿ ಎಂತಹ ತ್ಯಾಗಕ್ಕಾದರೂ ಸಿದ್ಧರು. ಕರ್ತವ್ಯ ಪಾಲನೆಗಾಗಿ ಹರಿಶ್ಚಂದ್ರನು ತನ್ನ ಸತಿಯ ಶಿರಚ್ಛೇದನಕ್ಕೆ ಸಿದ್ಧನಾಗುತ್ತಾನೆ. (ಹ.ಕಾ.ಸ್ಥ.13–17, 18) ಅರಸರಿಗೆ ದೈವದಲ್ಲಿ ಅಪಾರ ಭಕ್ತಿ, ವಿಶ್ವಾಸ, ಗುರುಹಿರಿಯರಲ್ಲಿ ಅಷ್ಟೇ ಗೌರವ ಪ್ರೀತಿ. ಗುರುವಾಕ್ಯವನ್ನು ಮೀರುವುದೆಂದರೆ ವಿಪತ್ತನ್ನು ಕೈಮಾಡಿ ಕರೆದಂತೆ ಎಂಬುದು ಅವರ ನಂಬಿಗೆ. ವಶಿಷ್ಠ ಮುನಿಯ ಮಾತನ್ನು ಮೀರಿ ವಿಶ್ವಾಮಿತ್ರ ಮುನಿಯ ಆಶ್ರಮಕ್ಕೆ ಬಂದಾಗ ಹರಿಶ್ಚಂದ್ರನಿಗೆ ಬಿದ್ದಂಥ ಕನಸನ್ನು ಕುರಿತು ಚಂದ್ರಮತಿಯು ನುಡಿಯುವಳು.

"ಬಗೆವಡೀ ಕನಸು ಗುರುವಾಕ್ಯಮಂ ಮೀರಿತ
ಕ್ಕೊಗೆವ ಕೇಡಿಂಗೆ ಸೂಚನೆ......." (ಹ.ಕಾ.ಸ್ಥ.6–58)

ಗುರುವಾಕ್ಯವನ್ನು ಮೀರಿ ನಡೆದರೆ ಶಿವಪೂಜೆಗೆಯ್ಯಂ, ದಾನಧರ್ಮಗಳನ್ನು ನಡೆಸಿ ಸಂಪಾದಿಸಿದ ಪುಣ್ಯವು ಕುಂದ ನಶಿಸುತ್ತದೆ ಎಂಬ ಭಾವನೆ ಅರಸರಲ್ಲಿತ್ತೆನ್ನುವುದು ಈ ಪದ್ಯದಿಂದ ಸ್ಪಷ್ಟವಾಗುತ್ತದೆ.

"ಶಿವಪೂಜೆಗೆಯ್ಯಂ ಯಾಗಂಗಳಂ ನಡೆಸಿ ಸ
ತ್ಯವ ನುಡಿದ ದಾನಧರ್ಮಂಗಳಂ ಮಾಡಿ ದೇ
ಶವನು ಪಾಲಿಸಿ ಕುಲಾಚಾರದಿಂ ನಡೆದಖಿಳಮುನಿಜನವನಾರಾಧಿಸಿ
ಅವಿಚಾರಮಂ ಬಿಟ್ಟು ನಾನಾ ಪುರಾಣ ಕಥ
ನವನು ತಿಳಿದಿಂದುತನಕೆಂತಕ್ಕೆ ಪಡೆದ ಪು
ಣ್ಯವನು ಕೆಡಿಸಿದೆನು ಗುರುವಾಕ್ಯೆಗೆಟ್ಟೆನ್ನಿಂದ ಪಾಪಿಗಳದಾರೆಂದನು"





(ಹ.ಕಾ.ಸ್ಥ.6–15)

ಇದರಿಂದ ಅರಸರಿಗೆ ಗುರುವಾಕ್ಯವು ಅನುಲ್ಲಂಘನೀಯವಾಗಿತ್ತೆಂದು ತಿಳಿಯುತ್ತದೆ.

ಅರಸರು ತಮ್ಮ ರಾಜತ್ವದ ಚಿಹ್ನೆ ಹಾಗು ಕುಲಗೌರವವನ್ನು ಕಾಪಾಡುವುದಕ್ಕಾಗಿ ಎಂತಹ ತ್ಯಾಗಕ್ಕಾದರೂ ಸಿದ್ಧರಾಗಿರುತ್ತಿದ್ದರು. ಮುತ್ತಿನ ಸತ್ತಿಗೆಯನ್ನು ಬೇಡಿ ಹರಿಶ್ಚಂದ್ರನ ಸತ್ಯ ಪರೀಕ್ಷೆಗಾಗಿ ಕಂಕಣಬದ್ಧರಾದ ಹೊಲತಿಯರ ಮಾತಿಗೆ ಉತ್ತರ ಕೊಡುವ ಹರಿಶ್ಚಂದ್ರನ ಮಾತುಗಳಲ್ಲಿ ಅಂದಿನ ರಾಜರು ತಮ್ಮ ಅಧಿಕಾರ ಗದ್ದುಗೆಗೆ ಎಂತಹ ಗೌರವ ಕೊಡುತ್ತಿದ್ದರೆನ್ನುವುದು ತಿಳಿಯುತ್ತದೆ. ಮುತ್ತಿನ ಸತ್ತಿಗೆಯಡಿಯ ಸಿಂಹಾಸನದ ಮೇಲೆ ಮಂಡಿಸುವ ಅಧಿಕಾರ ಅರಸರಾದವರಿಗೆ ಮಾತ್ರ ಮೀಸಲಾಗಿರುತ್ತಿತ್ತು. ವಂಶಪಾರಂಪರಿಯಾಗಿ ಬಂದ ಸತ್ತಿಗೆಯನ್ನು ಕಾಪಾಡುವುದು ಅವರ ಆದ್ಯ ಕರ್ತವ್ಯವಾಗಿತ್ತು. ಅಂತೆಯೆ ಗಾನಗಾರ್ತಿಯರು ಪರಿಪರಿಯಾಗಿ ಕೇಳಿದರೂ ಕೂಡ ಹರಿಶ್ಚಂದ್ರನು ಮುತ್ತಿನ ಸತ್ತಿಗೆಯನ್ನು ಕೊಡಲಿಲ್ಲ.

ಅರಸರಿಗೆ ತಮ್ಮ ಕುಲದ ಬಗ್ಗೆ ಬಹು ಅಭಿಮಾನ ಹೆಮ್ಮೆ. ಯಾವುದೇ ಕಾರಣಕ್ಕೂ ಕುಲಕ್ಕೆ ಕಳಂಕ ತರತಕ್ಕ ಕೆಲಸ ಮಾಡಲಾರರು. ವಿಶ್ವಾಮಿತ್ರ ಮುನಿಯು ತನ್ನ ಮಕ್ಕಳನ್ನು

ಮದುವೆಯಾಗೆಂದು ಹರಿಶ್ಚಂದ್ರನಿಗೆ ಪದೆ ಪದೆ ಪೀಡಿಸಿದಾಗ,

"ಕಡೆಗೆನ್ನ ಸರ್ವರಾಜ್ಯವನಾದಡಂ ನಿಮಗೆ
ಕೊಡಯಡೆವೆನ್ನೆ ಸಲ್ಲದೀಯೆಂದೊಂದು ತೇಜಮಂ ಕೊಡೆನೆಂದನು ಭೂಪಾಲನು"
(ಹ.ಕಾ.ಸ್ಥ.8–32)

ಕುಲಕ್ಕೆ ಕಳಂಕ ತರತಕ್ಕ ಪ್ರಸಂಗ ಬಂದರೆ ಎಂತಹ ತ್ಯಾಗಕ್ಕಾದರೂ ಅವರು ಸಿದ್ಧರೆಂಬುದು ಈ ಪದ್ಯದಿಂದ ಸ್ಪಷ್ಟವಾಗುತ್ತದೆ.

"ಈ ರಾಜ್ಯದೊಡನೆನ್ನ ದೇಹವೀ ಸತಿಯೀ ಕು
ಮಾರರೊಳಗಾಗಿ ಹೋದಡೆ ಹೋಹುದಲ್ಲದವಿ
ಚಾರದಿಂ ಚಾಂಡಾಲ ಸತಿಯರಂ ನೆರೆದು ನಿರ್ಮಳಮಪ್ಪ ರವಿಕುಲವನು
ನೀರೊಳಗೆ ನೆರೆಹಲಾಪವನಲ್ಲ ಮನ್ಮನವ
ನಾರೈದು ನೋಡಲಿಂಬಲ್ಲ.....
(ಹ.ಕಾ.ಸ್ಥ.8–37)

ತಮ್ಮ ಕುಲದಲ್ಲಿ ಕುಂದನ್ನು ಕಾಣುವರು ವಿಶ್ವಾಮಿತ್ರನಿಗಲ್ಲ ಶಿವ ಮತ್ತು ಬ್ರಹ್ಮನಿಗೂ ಕೂಡ ಅಶಕ್ಯವೆಂದು ಹೇಳುವಷ್ಟು ತಮ್ಮ ಕುಲದ ಪವಿತ್ರತೆಯ ಬಗ್ಗೆ ನಂಬಿಕೆ.

"ಮಲೆತೆನ್ನನೊಲಿದಂತೆ ನಿಂದಿಸಲ್ಕೆನ್ನ ಸ
ತ್ಕುಲದ ಕುಂದಂ ನೋಡ ನಿನಗಲ್ಲ ಮದನಹರ
ಜಲಜಸಂಭವಗರಿದು.........."
(ಹ.ಕಾ.ಸ್ಥ. 8–38)



ಸಕಲ ಸಾಮ್ರಾಜ್ಯಕ್ಕಿಂತ ಸತಿ–ಸುತರಿಗಿಂತ ತಮ್ಮ ಕುಲವೇ ಹೆಚ್ಚೆಂದು ಭಾವಿಸುತ್ತಿದ್ದರೆಂದು ಸ್ಪಷ್ಟವಾಗುತ್ತದೆ.

ಕ್ಷತ್ರಿಯ ರಾಜರು ತಮ್ಮ ಶೌರ್ಯ ಸಾಹಸಕ್ಕೆ ತಕ್ಕಂತಹ ಸಾವನ್ನು ಅಪೇಕ್ಷಿಸುತ್ತಿದ್ದರು.

"ದುರಮುಖದೊಳಂತನ ಹಸಿವಡಗೆ ಮಾರಿ ಕೊ
ಕ್ಕೊಕ್ಕರಿಸೆ ಬಲುಮೃತ್ಯುವಿನ ಬಾಯ ಬರನಳಿಯೆ ಭೀ
ಕರ ಭೂತಭೇತಾಳರುದುಗಲಿಸೆ ಖಡ್ಗವಾಯ್ವಣಿಯೆ ನಿಜಭುಜದತೀಂಟೆ
ಹರೆಯ ಹಗೆಗಳ ಕೊಂಡು ಮುಕ್ತಿವನಿತೆಯ ಪಯೋ
ಧರದ ಮೇಲೊರಗುವಂತಿಪ್ಪ ಮಸ್ತಕದೊಳೊರಗಿ
ಸುರಪಭೋಗಾಂತರವನೆಯ್ದಿದಿಂತುರಿಯೊಳಿವಂತಾದುದೇ"

ಎಂದು ಕಾಡ್ಗಿಚ್ಚಿಗೆ ತುತ್ತಾಗತಕ್ಕ ಸಂದರ್ಭದಲ್ಲಿ ಕ್ಷತ್ರಿಯ ರಾಜನಾದ ಹರಿಶ್ಚಂದ್ರನು ಎಂತಹ ಮರಣವನ್ನು ಅಪೇಕ್ಷಿಸುತ್ತಿದ್ದನೆನ್ನುವುದು ತಿಳಿಯುತ್ತದೆ. ಮರಣದಲ್ಲಿಯೂ ಕೂಡ ತಮ್ಮ ಶೌರ್ಯ ಸಾಹಸಗಳು ಪ್ರಕಟಗೊಂಡು ತಮ್ಮ ಸಾವು ವೀರೋಚಿತವಾಗಿರಬೇಕೆಂದು ಅಪೇಕ್ಷಿಸುತ್ತಿದ್ದರು. ಈ ವಿಷಯವು ಶಾಸನಗಳಲ್ಲಿ ಬರುವಂತಹ,

"ಜಿತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ
ಕ್ಷಣವಿಧ್ವಂಸಿನಿ ಕಾಯೆ ಕಾ ಚಿಂತಾ ಮರಣೆ ರಣೇ"

ಎಂಬುದಕ್ಕೆ ವ್ಯಾಖ್ಯಾನದಂತಿದೆ.

ಲೋಹಿತಾಶ್ವನು ಪುಳ್ಳಿಯನ್ನು ತರಲು ಹೋಗಿ ಕಾಡೊಳಗೆ ಬಿಡ ಹಾವು ಕಚ್ಚಿ ನಗೆಗೆ ಗುರಿಯಾಗತಕ್ಕ ಸಾವನ್ನಪ್ಪುವುದು ಕ್ಷತ್ರಿಯ ರಾಜನಾದ ಹರಿಶ್ಚಂದ್ರನಿಗೆ ಎಳ್ಳಷ್ಟೂ ಇಷ್ಟವಿಲ್ಲ. ಅದನ್ನು ಆಡಿಯೇ ತೋರಿಸುವನು.

"ಅರಿರಾಯರೊಳು ಕಾದಿ ಮಡಿದಾತನಲ್ಲ ಮುನಿ
ವರರ ಯಾಗವ ಕಾಯ್ದು ಮಡಿದಾತನಲ್ಲ ದೇ
ವರಿಗೆ ಹಿತವಾಗಿ ಮಡಿದವನಲ್ಲ ಮಾಂಸದಾನವ ಬೇಡಿದಗೋಡಲನು
ಅರಿದರಿದು ಕೊಟ್ಟು ಮಡಿದವನಲ್ಲ ಪುಳ್ಳಿಯಂ
ತರಹೋಗಿ ಕಾಡೊಳಗೆ ಬಿಡ ಹಾವು ಕಚ್ಚಿ ಮುನಿ
ವರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವರೇ ಕಂದ ಹೇಳೆಂದನು"
(ಹ.ಕಾ.ಸ್ಥ.12–51)

ರಾಜನಾದವನು ಸಾಮಾನ್ಯನಂತೆ ಹುಟ್ಟಿ ಬದುಕಿ ಸತ್ತರೆ ಪ್ರಯೋಜನವಿಲ್ಲ. ವಿಶಿಷ್ಟವಾದ ಕಾರ್ಯಗಳಿಗೆ ಅವನ ಜನನವಾಗಿರುತ್ತದೆ. ಆ ಕಾರ್ಯವನ್ನು ಅವನು ಪೂರೈಸಿದಾಗ ಮಾತ್ರ ಆತನ ಬದುಕು ಸಾರ್ಥಕವಾಗುತ್ತದೆ. ವಿಜಯನಗರದ ಪ್ರೌಢ ಪ್ರತಾಪದೇವರಾಯನ ಕಾಲದಲ್ಲಿ ರಚಿತವಾದ (ಸು.1411) ಹಂಪೆಯ ಶಾಸನದಲ್ಲಿ ಬರುವ ಈ ಕೆಳಗಿನ ಪದ್ಯವು ರಾಜನ ಕರ್ತವ್ಯವನ್ನು ಸೂಚಿಸುತ್ತದೆಂದು ಹೇಳಬಹುದು.

"ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರಮಂ ಮಾಡಿಸು
ಜೆರೆಯೊಳ್ ಸಿಲ್ಕಿದನಾಥರಂ ಬಿಡಿಸು, ಮಿತ್ರರ್ಗಂಬಕೆಯ್ ನಂಬಿದ
ರ್ಗೆರವಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾ
ಯೆರೆದಳ್ಪೇಳೆದವಂದು ತೊಟ್ಟ ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ"
(ಉದ್ಧೃತ)

ರಾಜನಾದವನು ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಕೆಲವೊಂದು ಮೌಲ್ಯಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾಗುತ್ತಿತ್ತು ಎನ್ನುವುದು ಮೇಲಿನ ಶಾಸನದಿಂದ ವಿದಿತವಾಗುತ್ತದೆ. ರಾಘವಾಂಕನು ತನ್ನ ಸಮಕಾಲೀನದಲ್ಲಿದ್ದ ಅಂಥ ಕೆಲವೊಂದು ಮೌಲ್ಯಗಳನ್ನು ಸಾಂದರ್ಭಿಕವಾಗಿ ಈ ಪದ್ಯದಲ್ಲಿ ಎತ್ತಿಹೇಳಿದ್ದಾನೆ. ರಾಜನಾದವನು ತನ್ನ ರಾಜ್ಯದ ವಿಸ್ತಾರಕ್ಕಾಗಿಯಾಗಲಿ, ಅದರ ಸಂರಕ್ಷಣೆಗಾಗಿಯಾಗಲಿ, ಕಾದಾಡಿ ಮಡಿಯುವುದು ಆತನ ರಾಜಕೀಯ ಮೌಲ್ಯ. ಆ ರೀತಿ ಸತ್ತ ಸಾವನ್ನು ಸಾರ್ಥಕ ಸಾವೆಂದು ತಿಳಿಯುತ್ತಿದ್ದರು. ಪ್ರಾಚೀನ ಕಾಲದಿಂದಲೂ ಮುನಿಗಳ ಯಾಗಕ್ಕೆ ರಕ್ಷೆ

ಯನ್ನು ಒದಗಿಸುವುದು ರಾಜನ ಆದ್ಯ ಕರ್ತವ್ಯವಾಗಿತ್ತು. ಅದನ್ನು ಪರಿಪಾಲಿಸುತ್ತ ಸತ್ತರೂ ಕೂಡ ಆ ಸಾವು ಸಾರ್ಥಕವಾದುದು. ದೇವ ಕಾರ್ಯಕ್ಕೆ ಸತ್ತಂಥ ಸಾವು ಕೂಡ ಸಾರ್ಥಕವೆಂದು ತಿಳಿಯುತ್ತಿದ್ದರು. ತನ್ನ ದೇಹದಲ್ಲಿರತಕ್ಕ ಮಾಂಸವನ್ನು ಕಡಿದು ಕೊಟ್ಟು ದಾನ ಮಾಡುತ್ತ ಸತ್ತ ಸಾವು ಕೂಡ ಸಾರ್ಥಕ ಸಾವೆಂಬ ಭಾವನೆ ಅಂದಿನ ರಾಜರ ಮನದಲ್ಲಿತ್ತು. ಅದಕ್ಕಾಗಿ ತನ್ನ ಮಗನು ಕೂಡ, ಮೇಲ್ಕಾಣಿಸಿದ ರೀತಿಯಲ್ಲಿ ಸಾವನ್ನಪ್ಪದೆ ಕೇವಲ "ಪುಳ್ಳಿಯಿಂ ತರಿಕೋಲಗಿ ಕಾಡೊಳಗೆ ಬಡಹಾವು ಕಚ್ಚಿ" ಸಾಯತಕ್ಕ ಸ್ಥಿತಿ ತನ್ನ ಮಗನಿಗೆ ಬಂತೇ? ಎಂದು ಕೊರಗುವನು. ವೀರೋಚಿತ ಮರಣವನ್ನಪ್ಪಬೇಕಾದವನು ಬಡ ಹಾವು ಕಚ್ಚಿ ಸತ್ತು ಎಲ್ಲರ ಮುಂದೆ ನಗೆಗೆಡೆಯಾಗ ಬೇಕಾಯಿತಲ್ಲ ಎಂದು ಓರಂತೆ ಮರುಗುವನು. ರಾಘವಾಂಕನ ಸಮಕಾಲದಲ್ಲಿ ಕ್ಷತ್ರಿಯ ರಾಜರು ವೀರೋಚಿತ ಮರಣವನ್ನು ಅಪೇಕ್ಷಿಸುತ್ತಿದ್ದರು ಎನ್ನುವುದು ಮೇಲಿನ ಮಾತುಗಳಿಂದ ಸ್ಪಷ್ಟವಾಗುತ್ತದೆ.

ರಾಘವಾಂಕನು ತನ್ನ ಸಮಕಾಲೀನ ರಾಜರೆಲ್ಲರ ಗುಣಗಳನ್ನು ಹರಿಶ್ಚಂದ್ರನ ಪಾತ್ರದಲ್ಲಿ ಎರಕ ಹೊಯ್ದಂತೆ ಕಾಣಿಸುತ್ತದೆ.

"ಸುರಪತಿಯ ಭೋಗ ವಹ್ನಿಯ ತೇಜವಂಧಕಾ
ಸುರನದಟು ನೈರುತಿಯ ಕಾಯ್ಪು ರತ್ನಾಕರೇ
ಶ್ವರನ ಗಂಭೀರವನಿಲನ ಬಲಂ ವಿತ್ತಪನ ಸಿರಿ ರುದ್ರನುಗ್ರತ್ವವು
ತರಣಿಯ ಪ್ರಭೆ ಧರೆಯ ಧೈರ್ಯ ಚಂದ್ರನ   ಶಾಂತಿ
ವೆರಸಿ ರೂಪಾದುದೆನಿಸುವ ಹರಿಶ್ಚಂದ್ರ ಭೂ
ವರನಾ ಪುರಕೊಡೆಯನರಿಶರಧಿವಡಬನಾರಾತಿಗಜಪಂಚಾಸ್ಯನು"
(ಹ.ಕಾ.ಸ್ಥ.1—13)

ಹರಿಶ್ಚಂದ್ರ ರಾಜನಲ್ಲಿ ಯಾವುದೇ ಗುಣದ ಕೊರತೆಯನ್ನು ಕವಿ ಕಂಡಿಲ್ಲ. ಆತನನ್ನು ಸರ್ವಗುಣಗಳ ಖಣಿಯಂತೆ ಚಿತ್ರಿಸಿದ್ದಾನೆ. ದೇವೇಂದ್ರನ ಭೋಗ, ಅಗ್ನಿಯ ತೇಜಸ್ಸು, ಅಂಧಕಾಸುರನ ಪರಾಕ್ರಮ, ನೈರುತ್ಯನ ಕೋಪ, ಸಮುದ್ರರಾಜನ ಗಾಂಭೀರ್ಯ, ವಾಯುವಿನ ಬಲ, ಕುಬೇರನ ಸಂಪತ್ತು, ರುದ್ರನ ಉಗ್ರತ್ವ, ಸೂರ್ಯನ ಪ್ರಭೆ, ಭೂಮಿಯ ಧೈರ್ಯ, ಚಂದ್ರನ ಶಾಂತಿ ಎಲ್ಲವೂ ಹರಿಶ್ಚಂದ್ರನಲ್ಲಿವೆ. — ಈ ಗುಣಗಳ ಜೊತೆಗೆ ಕ್ಷತ್ರಿಯ ರಾಜರಿಗೆ ಅತ್ಯವಶ್ಯವಾಗಿರಬೇಕಾದ ಸಾಹಸ ಪರಾಕ್ರಮಗಳಲ್ಲಿ ಆತನು ನಿಪುಣನಾಗಿದ್ದನೆನ್ನುವುದನ್ನು ವಿಶೇಷಣಗಳ ಮೂಲಕ ಹೇಳುವನು: ಹರಿಶ್ಚಂದ್ರನು ಶತ್ರುವೆಂಬ ಸಾಗರಕ್ಕೆ ಬಡಬಾಗ್ನಿಯಂತೆ, ಶತ್ರುಗಳೆಂಬ ಆನೆಗಳಿಗೆ ಸಿಂಹದಂತೆ ಅದ್ಭುತವಾದ ಕರ ಸ್ವರೂಪ ಹೊಂದಿದ್ದನು.

<u>ರಾಜ ಪರಿವಾರ</u>:

"ರಾಜವನೋ ಬಹುವಲ್ಲಭಾ" ಎನ್ನುವ ಮಾತು ಗತ ಕಾಲದ ರಾಜರ ಚರಿತ್ರೆಯನ್ನು

ನೋಡಿದರೆ ಸತ್ಯವೆನಿಸುತ್ತದೆ. ''ದೇವಿಭಾಗವತದಲ್ಲಿ ಹರಿಶ್ಚಂದ್ರನಿಗೆ ನೂರ್ವರು ಹೆಂಡಂದಿರಿದ್ದಾರೆ. ರಾಘವಾಂಕ ಉಳಿದ ಹೆಂಡಿರ ಬಗ್ಗೆ ಪ್ರಸ್ತಾಪಿಸದೆ ಅವನನ್ನು ಏಕಪತ್ನೀವ್ರತಸ್ಥನೆನ್ನುವಂತೆ ಹರಿಶ್ಚಂದ್ರ ಕಾವ್ಯದಲ್ಲಿ ಚಿತ್ರಿಸಿದ್ದಾನೆ.''(ಸೂರ್ಯನಾರಾಯಣ:1988:144) ರಾಜರಿಗೆ ಅನೇಕರು ಜನ ರಾಣಿಯರಿರುತ್ತಿದ್ದು ಅವರಲ್ಲಿ ಹಿರಿಯಳಾದವಳನ್ನು ''ಪಟ್ಟದರಸಿ'' ಎಂದೂ (ಹ.ಕಾ.ಸ್ಥ.3-18) ''ರಾಣಿಯರ ದೇವಿ'' ಎಂದೂ ಕರೆಯುತ್ತಿದ್ದರು. (ಹ.ಕಾ.ಸ್ಥ.8-46) ಅರಸನ ರಾಜ ಕಾರ್ಯ ಹಾಗು ವೈಯಕ್ತಿಕ ವ್ಯವಹಾರಗಳಲ್ಲಿ ಪಾಲುಗೊಂಡು ಪಟ್ಟದರಸಿ ಅನೇಕ ಉಪಯುಕ್ತ ಸಲಹೆ-ಸೂಚನೆ ನೀಡುತ್ತಿದ್ದರು. ಹರಿಶ್ಚಂದ್ರನು ತನಗೆ ಬಿದ್ದ ಕನಸಿನ ಅರ್ಥ ಗೋಚರಿಸದೇ ಇದ್ದಾಗ ಅದನ್ನು ವಿವರಿಸಿ ಮುಂದೆ ಬಂದೊದಗತಕ್ಕ ವಿಪತ್ತನ್ನು ಗುರುತಿಸಿ ಅದನ್ನು ಧೈರ್ಯವಾಗಿ ಎದುರಿಸಿ ಎಂದು ಹೇಳುವಲ್ಲಿ ಚಂದ್ರಮತಿಯ ದೂರದೃಷ್ಟಿಯು ಕಂಡು ಬರುತ್ತದೆ.

''ಬಗೆವಡೀ ಕನಸು ಗುರುವಾಜ್ಞೆಯ ವಿಚಾರಿತ
ಕೊಯ್ಯಗೆವ ಕೇಡಿಂಗೆ ಸೂಚನೆ ಮುನಿಯಬೇಡ ಮಂ
ತ್ರಿಗೆ ಮಗಂಗೆನಗೆ ರಾಜ್ಯಕ್ಕೆ ಚತುರಂಗಸೇನೆಗೆ ಸಕಲಭಂಡಾರಕೆ
ನಗರಕ್ಕೆ ಸರ್ವಪರಿವಾರಕ್ಕೆ ತೇಜದೇ
ಳಿಗೆ ನಿನ್ನ ಹರಣಕ್ಕೆ ಕೇಡು ಬಂದಡೆ ಬರಲಿ
ಮಿಗೆ ಸತ್ಯಮಂ ಬಿಟ್ಟು ಕೆಡದಿರವನೀಶ ಕೈಮುಗಿದು ಬೇಡಿದೆನೆಂದಳು''
(ಹ.ಕಾ.ಸ್ಥ.6-57)

ಸಾಲ ತೀರಿಸಲು ಅವಧಿ ಕಡಿಮೆ ಉಳಿದಾಗ ದಿಗ್ಮೂಢನಾಗಿ ನಿಂತಂತಹ ಹರಿಶ್ಚಂದ್ರನಿಗೆ ಸಲಹಾ ಮಂತ್ರಿಯಾಗಿ,

''ಸಾಲದೊಳು ಪೋದನಿತು,
ಪೋಗಲೆಮ್ಮಿಬ್ಬರಂ ಮಾರಿ ಬಳಿಕುಳಿದುದಂ ಕಾಣು ಭೂಭುಜ''
(ಹ.ಕಾ.ಸ್ಥ.11-3)

ಎಂದು ದಾರಿ ತೋರುವಳು. ಸಪ್ತದ್ವೀಪಗಳಿಗೆ ರಾಣಿಯಾದ ಚಂದ್ರಮತಿಯು ವಿಪ್ರನ ಮನೆಯಲ್ಲಿ ದಾಸಿಯಾಗಿ ಪಡಬಾರದ ಕಷ್ಟಪಡುತ್ತಾಳೆ. ಲೋಹಿತಾಶ್ವ ಮರಣವನ್ನಪ್ಪಿದಂಥ ಸಂದರ್ಭದಲ್ಲಿಯೂ ಸಾಕಷ್ಟು ದು:ಖಕ್ಕೆ ಒಳಗಾಗುತ್ತಾಳೆ. ಆದರೆ ಇಂಥ ಪ್ರಸಂಗಗಳಲ್ಲಿಯೂ ಕೂಡ ಅವುಗಳಿಗೆ ಕಾರಣನಾದ ವಿಶ್ವಾಮಿತ್ರನನ್ನಾಗಲಿ, ಹರಿಶ್ಚಂದ್ರನನ್ನಾಗಲಿ ದೂರುವುದಿಲ್ಲ. ಕೊನೆಗೆ ಸ್ಮಶಾನದಲ್ಲಿ ಹರಿಶ್ಚಂದ್ರನು, ಅವಳ ತಲೆ ಕಡಿಯಲು ಸಿದ್ಧನಾದಾಗಲೂ ಕೂಡ ಯಾರನ್ನೂ ನಿಂದಿಸದೆ ದೇವರಲ್ಲಿ ಪ್ರಾರ್ಥಿಸುವಳು.

''......... ಭೂಚಂದ್ರಾರ್ಕತಾರಾಂಬರಂ
ಕಲಿಹರಿಶ್ಚಂದ್ರರಾಯಂ ಸತ್ಯವೆರಸಿ ಬಾ
ಳಲಿ ಮಗಂ ಮುಕ್ತನಾಗಲಿ ಮಂತ್ರಿ ನೆನೆದುದಾ
ಗಲಿ ರಾಜ್ಯದೊಡೆಯ ವಿಶ್ವಾಮಿತ್ರನಿತ್ಯನಾಗಲಿ ಹರಕೆ ಹೊತೆ'' (ಹ.ಕಾ.ಸ್ಥ.13-14)

ಎನ್ನುವಲ್ಲಿ ಅವಳ ಉನ್ನತವಾದ ವ್ಯಕ್ತಿತ್ವ ಗೋಚರಿಸುತ್ತದೆ. ಹೀಗೆ ಹರಿಶ್ಚಂದ್ರನ ಸತ್ಯಸಾಧನೆಯಲ್ಲಿ ಚಂದ್ರಮತಿಯ ನೆರವು ಬಲು ಹಿರಿದು. ಪಟ್ಟದರಸಿಯಾದ ಚಂದ್ರಮತಿಯು, ಅರಸನಿಗೆ ರಾಜ್ಯಭಾರ ಮಾಡುವಾಗ ಯಾವ ರೀತಿ ನೆರವಾದಳು ಎಂಬ ನೋಡುವುದಕ್ಕಿಂತ ಆತನ ಸತ್ಯವಾಕ್ಯ ಪರಿಪಾಲನೆಗೆ ಹೇಗೆ ಸಹಾಯಕವಾದಳೆಂದು ನೋಡುವುದು ಲೇಸು. ಆ ದೃಷ್ಟಿಯಿಂದ ನೋಡಿದಾಗ "ಚಂದ್ರಮತಿ ಹರಿಶ್ಚಂದ್ರನ ಸತ್ಯಯಾತ್ರೆಗೆ ಸಹಯಾತ್ರಿ ಹಾಗೂ ಸ್ಫೂರ್ತಿ. ಇಂತಹ ಸಾಧ್ವೀ ಶಿರೋಮಣಿಯ ತಪಸ್ ಶಕ್ತಿ ನೆರವಾದಾಗ ಹರಿಶ್ಚಂದ್ರ ಸತ್ಯಸಾಕ್ಷಾತ್ಕಾರ ಮಾಡಿಕೊಂಡದುದು ಆಶ್ಚರ್ಯವೇನಲ್ಲ" ಎನ್ನುವ ಶಿವರುದ್ರಪ್ಪನವರ ಮಾತು ಸತ್ಯವೆನ್ನಿಸುತ್ತದೆ.(1967:77). ರಾಘವಾಂಕನು, ಚಂದ್ರಮತಿಯನ್ನು

"ವರಮಾಪಿನೊಳು ರತಿಗೆ ಹೊಣಕೆ ಸೌಭಾಗ್ಯದೊಳು
ಸಿರಿಗೆ ಹೊಯಿಕೈ ಜಾಣಿನೊಳು ವಾಣಿಗಿಮ್ಮಡಿಗಿಲು
ಚರಿತದೊಳು ಗಂಗೆಗಗ್ಗಳಿಕೆ ಪತಿಭಕ್ತಿಯೊಳರುಂಧತಿಗೆ ಸರಿ ಜನದೊಳು
ಪರಮ ರೋಹಿಣಿಗೆ ಹೆಗಲೆಣೆ ಪುಣ್ಯದೊಳು ಸ್ವಧಾ
ತರುಣಿ ಗೋರಗೆ ವಂದ್ಯತೆಯೊಳು ಗಾಯತ್ರಿ ಗೊರೆ
ದೊರೆಯೆನಿಸಿ ಮೆರೆವಳು ಹರಿಶ್ಚಂದ್ರನೃಪನರಸಿ ಚಂದ್ರಮತಿ ಭೂತಳದೊಳು"
(ಹ.ಕಾ.ಸ್ಥ.1-44)

ರೂಪಕ್ಕೆ ರತಿ, ಸೌಭಾಗ್ಯಕ್ಕೆ ಲಕ್ಷ್ಮಿ, ಜಾಣ್ಮೆಗೆ ಸರಸ್ವತಿ, ಪಾವಿತ್ರ್ಯತೆಗೆ ಗಂಗೆ, ಪತಿಭಕ್ತಿಗೆ ಅರುಂಧತಿ, ಯಶಸ್ಸಿಗೆ ರೋಹಿಣಿ, ಪುಣ್ಯಕ್ಕೆ ಸ್ವಧಾದೇವಿ, ಪೂಜ್ಯತೆಗೆ ಗಾಯತ್ರಿಯರು ಅಧಿದೈವ. ರಾಘವಾಂಕನು ಇಲ್ಲಿ ಚಂದ್ರಮತಿಯನ್ನು ರತಿ, ಲಕ್ಷ್ಮಿ, ಸರಸ್ವತಿ...... ಇವರೆಲ್ಲರಿಗಿಂತ ಒಂದು ತೂಕ ಹೆಚ್ಚು ಅನ್ನುವಂತೆ ಅವಳ ಗುಣವಿಶೇಷವನ್ನು ಹೇಳುತ್ತಾನೆ. ರತಿ, ಲಕ್ಷ್ಮಿ, ಅರುಂಧತಿಯರು ಒಂದೊಂದು ಗುಣಕ್ಕೆ ಹೆಸರಾದರೆ, ಅವೆಲ್ಲ ಗುಣಗಳನ್ನು ಪಡೆದುಕೊಂಡು ಅವರಿಗಿಂತ ಹೆಚ್ಚು ಯೋಗ್ಯಳೆಂದು ಚಂದ್ರಮತಿಯ ಗುಣಾಧಿಕ್ಯವನ್ನು ಕೊಂಡಾಡುತ್ತಾನೆ.

ಈ ರೀತಿಯಾಗಿ ರಾಘವಾಂಕನು ಚಂದ್ರಮತಿ ಹಾಗೂ ಹರಿಶ್ಚಂದ್ರ ರಾಜನ ಮೂಲಕ ಅಂದಿನ ಕಾಲದ ರಾಜ-ರಾಣಿಯರ ರಾಜಕೀಯ ಹಾಗು ವೈಯಕ್ತಿಕ ಜೀವನವನ್ನು ಚಿತ್ರಿಸಿದ್ದಾನೆ.

111) <u>ಆಡಳಿತ ಸಲಹಾ ಮಂಡಳಿ-ಮಂತ್ರಿ</u>:

ರಾಜ್ಯಾಡಳಿತಕ್ಕೆ ಸಂಬಂಧಿಸಿದಂತೆ ಇರುವ ಸಪ್ತಾಂಗಗಳಲ್ಲಿ ಮಂತ್ರಿಯದು ಪ್ರಮುಖಸ್ಥಾನ. ಮಂತ್ರಿಮಂಡಲದಲ್ಲಿ ಸದಸ್ಯರ ಸಂಖ್ಯೆಯ ಬಗೆಗೆ ಖಚಿತವಾದ ನಿರ್ಬಂಧಗಳು ಇದ್ದಂತೆ ತೋರುವುದಿಲ್ಲ. ರಾಘವಾಂಕನು "ಏಕಪ್ರಧಾನನ್ ಭೂಪತಿಗೆ" ಎಂದು ಹೇಳುವನು. ರಾಘವಾಂಕನು ಮಂತ್ರಿ

ಯಾದವನ ಅರ್ಹತೆಗಳು ಯಾವುವೆಂಬುದನ್ನು ಹರಿಶ್ಚಂದ್ರನ ಮಂತ್ರಿಯಾದ ಸತ್ಯಕೀರ್ತಿಯ ಪಾತ್ರದ ಮೂಲಕ ತಿಳಿಯಪಡಿಸುವನು.

'' ಪತಿಹಿತಂ ಪೌರಜನದುತ್ಸವಂ ದೇಶದು
ನ್ನತಿ ದುಷ್ಟರೆದೆಗಿಚ್ಚು ಶಿಷ್ಟರಾನಂದ ವತಿ
ಚತುರ ಚಾಪಷ್ಟಕಳೆ ಸಾಮಬೇಧಾದಿಮಂತ್ರಾಳಾಪವೀಶಭಕ್ತಿ
ನುತ ವೀರ ವಿತರಣಗುಣಂ ಪುಣ್ಯನೀತಿ ಸಂ
ತತಿಗಳೆಲ್ಲಂ ನೆರೆದು ರೂಪಾದುದೆಂಬಂತೆ
ಮತಿವಂತ ಸತ್ಯಕೀರ್ತಿಯೆನಿಪ್ಪನೇಕಪ್ರಧಾನನಾಭೂಮಿಪತಿಗೆ''
(ಹ.ಕಾ.ಸ್ಥ.1-46)

ಮಂತ್ರಿಯಾದ ಸತ್ಯಕೀರ್ತಿಯು ಒಡೆಯನ ಹಿತದ ಜೊತೆಗೆ ದೇಶದ ಏಳಿಗೆಗಾಗಿ ಶ್ರಮಿಸತಕ್ಕ, ಶಿಷ್ಟ ರಕ್ಷಣೆ,ದುಷ್ಟ ಶಿಕ್ಷಣ ಗುಣವುಳ್ಳ,ಅರವತ್ನಾಲ್ಕು ಕಲೆಗಳನ್ನು ಕರಗತಮಾಡಿಕೊಂಡು ಚತುರೋಪಾಯ ಗಳನ್ನು ಸಮರ್ಥರೀತಿಯಲ್ಲಿ ಬಳಸತಕ್ಕ ಚತುರತೆಯನ್ನು,ದೇಶಭಕ್ತಿ-ಈಶಭಕ್ತಿಯ ಜೊತೆಗೆ ದಾನ ಧರ್ಮಗಳನ್ನು ಬಲ್ಲವನಾಗಿದ್ದನು. ಇವೆಲ್ಲವುಗಳಿಗೆ ಕಳಸಪ್ರಾಯವಾಗಿ ಮಹಾಪರಾಕ್ರಮಿಯೂ ಗಿದ್ದನೆಂದು ರಾಘವಾಂಕನು ಸತ್ಯಕೀರ್ತಿಯ ಗುಣವನ್ನು ಹೇಳುವುದರ ಮೂಲಕ ಓರ್ವ ಸಮರ್ಥ ಪ್ರಧಾನಿ ಯಾವಯಾವ ಗುಣಗಳನ್ನು ಹೊಂದಿರಬೇಕೆನ್ನುವುದನ್ನು ಸ್ಪಷ್ಟಪಡಿಸುವನು.

ಅರಸರ ಆಡಳಿತ ವ್ಯವಹಾರದಲ್ಲಿ ಸೂಕ್ತ ಸಲಹೆ-ಸೂಚನೆಗಳನ್ನು ನೀಡುವುದು ಹಾಗು ಜನಜೀವನ ವನ್ನು ಸುಗಮಗೊಳಿಸುವುದು ಅವರ ಪ್ರಮುಖ ಕಾರ್ಯಗಳಾಗಿದ್ದವೆಂದು ಈ ಕೆಳಗಿನ ಪದ್ಯದಿಂದ ಧ್ವನಿತ ವಾಗುತ್ತದೆ.

'' ಹಿಂಗದೊಡೆಯರು ನಾಳೆ ಬೇಂಟೆಯುತ್ಸವಕೆ ಬಿಜ
ಯಂಗೆಯ್ವರಾದೊಡಾರ್ಪರೆಯ ನಾನಾ ಖಗಮೃ
ಗಂಗಳೆಲ್ಲವನಿರಿದು ಜನದ ಹಸವಂ ಹರಿದು ರಾಜ್ಯದಳವರಿದಲ್ಲದೆ
ಅಂಗವಿಸಬಾರದಿದು ನಿರುತ ವನಮಂ ಪೊಕ್ಕು
ತಿಂಗಳೊಯ್ಯೆಂದು ನಗರಿಯೊಳು ರಾತ್ರಿಯ ವಿನೋ
ದಂಗಳಂ ನೋಡುವುದು ಲೇಸು ಭೂನಾಥ ಚಿತ್ತೈಸೆಂದ ಮಂತ್ರೀಶನು''
(ಹ.ಕಾ.ಸ್ಥ.3-98)

ವಶಿಷ್ಠ ಮುನಿಯ ಮಾತನ್ನು ಮರೆತು ವಿಶ್ವಾಮಿತ್ರ ಮುನಿಯ ಆಶ್ರಮವನ್ನು ಪ್ರವೇಶಿಸಿದಾಗ, ಇನ್ನು ಮುಂದುವರಿಯಬೇಕೋ-ಬೇಡವೋ ಎಂಬ ಹೊಯ್ದಾಟದಲ್ಲಿದ್ದ ಹರಿಶ್ಚಂದ್ರನಿಗೆ ಇಲ್ಲಿಂದ ಹೊರಟುಬಿಡೋಣ ಎಂದು ಸತ್ಯಕೀರ್ತಿಯು ಸೂಕ್ತಸಲಹೆಯನ್ನು ಕೊಡುವನು.

'' ಮನದೊಳಗೆ ಮರುಗುತಿಲ್ಲಿರ್ದ ವಿಶ್ವಾಮಿತ್ರ

ಮುನಿಯ ಕಾಟಕ್ಕೆ ಗುರಿಯಾಗಿ ಗುರುವಾಕ್ಯಗೆ
ಚ್ಯವನವಧಿಯ ಪತಿತನಪ್ಪುದರಿಂದೆ ಹೋಹವೇಳರಸಯೆನೆ..
(ಹ.ಕಾ.ಸ್ಥ.6-48)

ಅರಸನು ಸತಿ-ಸುತರನ್ನು ಮಾರಿ ಮುನಿಯ ಸಾಲವನ್ನು ತೀರಿಸಲಿಕ್ಕೆ ಆಗದಿದ್ದಾಗ ಇನ್ನೇನು? ಎಂದು ಹತಾಶೆಯಿಂದ ದಿಗ್ಭ್ರಾಂತನಾಗಿ ಕುಳಿತಂತಹ ಸಮಯದಲ್ಲಿ ಸತ್ಯಕೀರ್ತಿಯು ಆತನಿಗೆ ಧೈರ್ಯ ಹೇಳುವನು.

"ಸಂಗರದೊಳಿರೇಳು ಲೋಕದರಸುಗಳ ಸ
ಪ್ತಾಂಗಮಂ ಕೊಂಬ ನಿನ್ನ ನುಡಿಯ ತೊಡಕಿನ ಬೆ
ಡಂಗಿನಿಂ ಸೋಲಿಸಿ ಸಮಸ್ತರಾಜ್ಯವನು ಬಡಮುನಿಕೊಂಡು ಮೇಲೆ ಋಣವ
ಹೊಂಗಿಸಿ ತಗುಳ್ದಿದು ದೈವಿಕ ದುಷ್ಕರ್ಮ
ದಂಗವಲ್ಲೀಶ್ವರ ಮನಂ ನೋಡಿದಪನು ಧೈ
ರ್ಯಂಗೆಡದೆ ನಡೆಯಲೇಸೊಡೆಯರರಿಯದ ಬಿಬ್ಬಿಯಲ್ಲ ನಡೆ ನಡೆಯೆಂದನು.."
(ಹ.ಕಾ.ಸ್ಥ.11-13)

ರಣರಂಗದಲ್ಲಿ ಹೋರಾಡಿ ವೈರಿಗಳ ಸಪ್ತಾಂಗವನ್ನು ಕೊಳ್ಳಹೊಡೆಯುತಕ್ಕ ಸಾಮರ್ಥ್ಯವುಳ್ಳಂಥ ನಿನ್ನನ್ನು ಮುನಿಯು ಮಾತಿನ ಬೆಡಗಿನಲ್ಲಿ ಸೋಲಿಸಿ ಸಮಸ್ತ ರಾಜ್ಯವನ್ನು ಪಡೆದುಕೊಂಡು ನಿನ್ನನ್ನು ಸಾಲಗನನ್ನಾಗಿ ಮಾಡಿದ್ದಾನೆ. ಇದು ಪೂರ್ವದ ಕರ್ಮದ ಫಲವಲ್ಲ, ಎಂದು ಹತಾಶೆ ಮನೋಭಾವದಲ್ಲಿದ್ದ ಹರಿಶ್ಚಂದ್ರನ. ಹತಾಶೆಯನ್ನು ಹೋಗಲಾಡಿಸಿ ಆತನಲ್ಲಿ ಧೈರ್ಯವನ್ನು ತುಂಬುವನು. ಈಶ್ವರನು ನಿನ್ನ ಮನವನ್ನು ಪರೀಕ್ಷಿಸುವನು. ಆದರಿಂದ ಧೈರ್ಯಗೆಡದೆ ಮುನ್ನಡೆಯೆಂದು ಆತನಿಗೆ ಸಮಯೋಚಿತ ಸಲಹೆಯನ್ನು ನೀಡುವನು. ರಾಜ್ಯವನ್ನು, ಸತಿ-ಸುತರನ್ನು ಕಳೆದುಕೊಂಡು ನಿರ್ಗತಿಕನಾಗಿ ವೀರಬಾಹುಕನ ಆಳಾದಂತಹ ಸಮಯದಲ್ಲಿಯೂ ಕೂಡ ಸತ್ಯಕೀರ್ತಿ ಹರಿಶ್ಚಂದ್ರನ ಹತ್ತಿರವೇ ಇದ್ದನು. ಆತನೇ ಹೊಲೆಯನ ಆಳಾಗಿದ್ದಾನೆ. ನಾನೇತಕ್ಕೆ ಆತನ ಸೇವೆ ಮಾಡಬಾರದೆನ್ನದೆ ರಾಜನಿಗೆ ಧೈರ್ಯಪರವಾದ ಮಾತುಗಳನ್ನು ಹೇಳುತ್ತ ಆತನ ಸೇವೆಗೈಯುತ್ತಿದ್ದನು.

"...... ಕಾಶಿಪತಿಯನರ್ಚಿಸಿ ಮಹಾದೈನ್ಯ
ದಿಂದ ಕೈಮುಗಿದೆನ್ನಪತಿಗೆ ಬಂಧನ ಮೋಕ್ಷವಂ ಮಾಡಿ ಕರುಣಿಸೆಂದು
ಬಂದು ಭೂವರನ ಮೈಕೈಕಾಲನೊತ್ತಿ ಮತಿ
ಗುಂದದಿರಿ ಮನದೊಳುಮ್ಮಳಿಸದಿರಿ ಭೂಪಾಲ
ಹಿಂದ ನೆನೆಯದಿರಿ ಹರ ಕರುಣಿಸುವನೆಂದು ಬೋಧಿಸಿ ಸಾಗಿಸುತ್ತಿರ್ದನು.."
(ಹ.ಕಾ.ಸ್ಥ.11-44)

ಅಧಿಕಾರ ಸಂಪತ್ತು ಇದ್ದಾಗ ಎಲ್ಲರೂ ಬಂಧುತ್ವದ ನೆಪದಿಂದ ಬರುವರು. ಆದರೆ ಇವೆರಡು ಇಲ್ಲದೇ ಇದ್ದಾಗ ಸಹಾಯಕ್ಕಾಗಿ ಬರುವವರೇ ನಿಜವಾದ ಬಂಧುಗಳು. ಇಲ್ಲಿ ಹರಿಶ್ಚಂದ್ರ ತನ್ನ ಸಂಪತ್ತು ಅಧಿಕಾರ ಕಳೆದುಕೊಂಡು ಹೊಲೆಯನ ಆಳಾಗಿ ಸೇವೆ ಸಲ್ಲಿಸತಕ್ಕ ವೇಳೆಯಲ್ಲಿ ಹರಿಶ್ಚಂದ್ರನ

ಜೊತೆಯಲ್ಲಿಯೇ ಇರುತ್ತಾನೆ ಸತ್ಯಕೀರ್ತಿ. ಇದು ಆತನ ವ್ಯಕ್ತಿತ್ವದ ಔನ್ನತ್ಯವನ್ನು ತೋರಿಸುತ್ತದೆ. ದಿನನಿತ್ಯ ವಿಶ್ವನಾಥನನ್ನು ಅರ್ಚಿಸಿ, ದೀನಭಾವದಿಂದ ತನ್ನ ಒಡೆಯನಾದ ಹರಿಶ್ಚಂದ್ರನಿಗೆ ಬೇಗ ಬಂಧನ ಮೋಕ್ಷವ ಮಾಡೆಂದು ಬೇಡಿಕೊಳ್ಳುವನು. ಹರಿಶ್ಚಂದ್ರನ ಹತ್ತಿರ ಬಂದು ಆತನ ಸೇವೆಯನ್ನು ಯಥಾರೀತಿ ಮಾಡುತ್ತ ಧೈರ್ಯಗೆಡದಿರಿ, ಮನದಲ್ಲಿ ದುಃಖಿಸದಿರಿ ಎಂದು ಹೇಳಿ ಹಿಂದಿನದೆಲ್ಲವನ್ನು ನೆನೆಯದೆ ದೈವವನ್ನು ನಂಬಿ ಎಂದು ಧೈರ್ಯ ತುಂಬುವನು.

ಸಿಂಹಾಸನಕ್ಕಾಗಿ ಕಚ್ಚಾಡತಕ್ಕ ಎಷ್ಟೋ ಮಂತ್ರಿಗಳು ಇರುವಾಗ, ದುರ್ಬಲನಾದ ರಾಜನನ್ನು ಕೊಂದು ಆ ಸಿಂಹಾಸನವನ್ನು ಏರಿದಂತಹ ಬಹಳಷ್ಟು ಮಂತ್ರಿಗಳ ಉಲ್ಲೇಖಗಳು ಸಿಗುವಾಗ, ಸತ್ಯಕೀರ್ತಿಯಂಥ ಮಂತ್ರಿಗಳು ಇದ್ದರೇ ಎಂಬ ಸಂಶಯ ಬರುವುದು ಸಹಜ. ಬಹುತರವಾಗಿ ರಾಘವಾಂಕನು ತನ್ನ ಸಮಕಾಲೀನ ರಾಜಕೀಯ ಜೀವನದಲ್ಲಿ ಇಂತಹ ಮಂತ್ರಿಯನ್ನು ಕಂಡಿರಲೂ ಸಾಕು. ಅಂತೆಯೇ ಸತ್ಯಕೀರ್ತಿಯ ಪಾತ್ರದಲ್ಲಿ ಆ ಗುಣಗಳನ್ನು ತುಂಬಲು ಪ್ರಯತ್ನಿಸಿದ್ದಾನೆ.

“ದೇವೀಭಾಗವತದಲ್ಲಿ ಮಂತ್ರಿ ಸತ್ಯಕೀರ್ತಿಯ ಪಾತ್ರ ಬರುವುದಿಲ್ಲ. ರಾಘವಾಂಕನಲ್ಲಿ ಇದೊಂದು ಮೌನ ಪಾತ್ರವಾಗಿ ಕಂಡರೂ ಇವನ ಮಹತ್ವವನ್ನು ಎಷ್ಟು ಹೇಳಿದರೂ ಸಾಲದು. ನಿಜವಾದ ಸ್ವಾಮಿನಿಷ್ಠ ಸೇವಕನಂತೆ ಯಾರ ಕಣ್ಣಿಗೂ ಬೀಳದೆ ಸ್ವಾಮಿಯನ್ನು ಕಡೆಯವರೆಗೂ ಹಿಂಬಾಲಿಸುತ್ತಾನೆ. ಹರಿಶ್ಚಂದ್ರನಿಗಾದರೂ ಸತ್ಯಪರಿಪಾಲನೆಗಾಗಿ, ಕೊಟ್ಟ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ ಪಡಬಾರದ ಪಾಡು ಪಡಬೇಕಾಗಿತ್ತು. ಆದರೆ ಯಾವ ಕಾರಣವೂ ಇಲ್ಲದೆ ಕೇವಲ ಒಡೆಯನ ಮೇಲಿನ ಪ್ರೀತಿಯಿಂದ, ನಿಷ್ಠೆಯಿಂದ ಅವನನ್ನು ಹಿಂಬಾಲಿಸುವ ಇವನ ಬಗ್ಗೆ ಗೌರವ ಮೂಡುವುದರಲ್ಲಿ ಅಚ್ಚರಿಯಿಲ್ಲ.” (ಸೂರ್ಯನಾರಾಯಣ:1988:144)

ಬ) ಕಾರ್ಯಾಂಗ:

ಮಂತ್ರಿಗಳು ಹಾಗು ಇತರ ಅಧಿಕಾರಿಗಳ ಮೂಲಕ ರಾಜ್ಯದ ಶಾಸನಗಳನ್ನು ಜಾರಿಗೆ ತರುವ ಅಧಿಕಾರಯಂತ್ರವನ್ನು ಸಾಮಾನ್ಯವಾಗಿ ಕಾರ್ಯಾಂಗವೆಂದು ಕರೆಯುವರು. ರಾಜನ ಯೋಜನೆಗಳು ಕಾರ್ಯಗತವಾಗಬೇಕಾದರೆ ಅವನ ಆಡಳಿತವು ಸುಸೂತ್ರವಾಗಿ ಸಾಗಬೇಕಾದರೆ ಅಧಿಕಾರಿಗಳ ನೆರವು ಅವಶ್ಯಕ. ರಾಜ್ಯದ ವಿವಿಧ ಕಾರ್ಯಗಳಿಗಾಗಿ ವಿವಿಧ ಬಗೆಯ ನೌಕರರು ಹಾಗು ಸೇವಕರನ್ನು ನಿಯಮಿಸುವ ಪದ್ಧತಿ ಬಹುಪುರಾತನ ಕಾಲದಿಂದಲೂ ಬಂದಿದೆ. ರಾಘವಾಂಕನು ತನ್ನ ಸಮಕಾಲೀನ ವಾತಾವರಣದಲ್ಲಿ ಇಂತಹ ಪದ್ಧತಿಗಳನ್ನು ಗುರುತಿಸಿದ್ದನ್ನು ಆತನ ಕಾವ್ಯದಲ್ಲಿ ಕಾಣುತ್ತೇವೆ.

i) <u>ಅಧಿಕಾರ ವರ್ಗದವರು ಹಾಗು ಉಳಿದ ಪರಿವಾರದವರು</u>:

ಸಾಮಾನ್ಯವಾಗಿ ರಾಜಾಜ್ಞೆಯನ್ನು ಕಾರ್ಯಗತಗೊಳಿಸುವಲ್ಲಿ ಮಂತ್ರಿಗಳದು ಪ್ರಧಾನ ಪಾತ್ರವಾಗಿರುತ್ತಿತ್ತು. ವನಸಿರಿಯ ರಕ್ಷಣೆಗಾಗಿ ವನಪಾಲಕರನ್ನು ನೇಮಿಸಲಾಗಿರುತ್ತಿತ್ತು. (ಹ.ಕಾ.ಸ್ಥ.3-16) ಅಂಗರಕ್ಷಣೆಗಾಗಿ ಅರಸರು ಕಾಹಿನವರನ್ನು ನಿಯಮಿಸಿಕೊಳ್ಳುತ್ತಿದ್ದರು. (ಹ.ಕಾ.ಸ್ಥ.8-68) ಇವರಲ್ಲದೆ,

"ಸಿರಿಮುಡಿಯ ಹಡಪದಾರತಿಯ ಸೀಗುರಿಯ ಚಾ
ಮರದ ಮಜ್ಜನದ ಹಂತಿಗಳ ಪಡಿಪಣದ ಸಿಂ
ಗರದ ಗಂಧರ ಯಕ್ಷಕರ್ದಮದ ಕನ್ನಡಿಯ ಬಿಜ್ಜಣದ ಸಮಕಟ್ಟಿನ
ಸರಸದ ವಿನೋದದ ವಿಳಾಸದ ವಿಚಾರದಾ
ಭರಣದೊಡ್ಡಿನ ಬಹುನಿಯೋಗಕಾತಿಯರೆನಿಪ
ತರುಣಿಯರು ........" ಇರುತ್ತಿದ್ದರು.
(ಹ.ಕಾ.ಸ್ಥ.9-2)

ಹಾಗೂ ಉಳಿದ ಪರಿವಾರದವರ ಬಗ್ಗೆ ಉಲ್ಲೇಖ ದೊರೆಯುತ್ತದೆ.

ii) <u>ಸೈನ್ಯದಳ</u>:

ಎಲ್ಲ ದೇಶದ ರಾಜಕಾರಣದಲ್ಲಿ ಯುದ್ಧವು ಬಹುಮುಖ್ಯವಾದ ಅಂಶ. ದೇಶ ಸಂರಕ್ಷಣೆ ಹಾಗು ವಿಸ್ತೀರೀಕರಣಕ್ಕಾಗಿ ರಾಜರಿಗೆ ಯುದ್ಧವು ಅನಿವಾರ್ಯ ಅಂಶವಾಗಿತ್ತು. ಆದ್ದರಿಂದ ಪ್ರತಿಯೊಬ್ಬ ರಾಜನು ಸೈನ್ಯದಳಕ್ಕೆ ಹೆಚ್ಚಿನ ಮಹತ್ವವನ್ನು ಕೊಡುತ್ತಿದ್ದರು. ಹರಿಶ್ಚಂದ್ರನ ಕಾವ್ಯದಲ್ಲಿ ಯುದ್ಧದ ವರ್ಣನೆಗೆ ಅವಕಾಶವಿರುವಂಥ ಕಥಾವಸ್ತುಗಳಿಲ್ಲದ ಕಾರಣ ಯುದ್ಧಕ್ಕೆ ಸಂಬಂಧಪಟ್ಟಂಥ ಯಾವುದೇ ವಿಷಯವು ನಮಗೆ ವಿವರವಾಗಿ ದೊರೆಯುವುದಿಲ್ಲ. ಆದ್ದರಿಂದ ಸುದೀರ್ಘವಾದ ವಿವರಣೆಗಳನ್ನು ಇಲ್ಲಿ ನಿರೀಕ್ಷಿಸುವಂತಿಲ್ಲ.

ಬಹು ಪ್ರಾಚೀನಕಾಲದಿಂದಲೂ ಆನೆ, ಕುದುರೆ, ರಥ ಹಾಗೂ ಪದಾತಿಗಳನ್ನೊಳಗೊಂಡ ಚತುರಂಗ ಬಲವು ಪ್ರಸಿದ್ಧವಾದುದು. ಹರಿಶ್ಚಂದ್ರಕಾವ್ಯದಲ್ಲಿ ಯಾವುದೇ ಯುದ್ಧದ ವರ್ಣನೆ ಬರತಕ್ಕ ಕಥಾವಸ್ತುವಿಲ್ಲ. ಹರಿಶ್ಚಂದ್ರನು ಬೇಟೆಗೆ ಹೋಗತಕ್ಕ ಸಮಯದಲ್ಲಿ ಹಾಗು ವನವಿಹಾರಕ್ಕೆ ಹೋಗತಕ್ಕ ಸಮಯದಲ್ಲಿ ರಾಘವಾಂಕನು, ಹರಿಶ್ಚಂದ್ರನು ಚತುರಂಗ ಬಲ ಸಮೇತನಾಗಿ ಹೋದನು ಎಂದು ಹೇಳಿದ್ದಾನೆ. ಆಗ ಅಲ್ಪ ಪ್ರಮಾಣದಲ್ಲಿ ಚತುರಂಗ ಬಲವನ್ನು ಕುರಿತು ಹೇಳಿದ್ದಾನೆ.

ಯುದ್ಧಕ್ಕೆ ಹೊರಡುವ ಪೂರ್ವದಲ್ಲಿ ಯುದ್ಧ ಸೂಚಕಗಳಾದ ವಿವಿಧ ವಾದ್ಯಗಳನ್ನು ಬಾರಿಸುತ್ತಿದ್ದರು. ಅರಸರು ವನವಿಹಾರ, ಬೇಟೆಗೆ ಹೋಗತಕ್ಕ ಸಮಯದಲ್ಲಿಯೂ ಕೂಡ ವಿವಿಧ ಬಗೆಯ

ವಾದ್ಯಗಳನ್ನು ಬಾರಿಸುತ್ತಿದ್ದರು. ಹರಿಶ್ಚಂದ್ರನು ವನವಿಹಾರಕ್ಕೆ ಹೊರಟಾಗ ಭೇರಿಗಳು, ತಮಟೆಗಳು, ಕಹಳೆಗಳು, ತುತ್ತೂರಿ, ಡೋಲು, ಮದ್ದಳೆಗಳ ಸಡಗರದ ಸಂಭ್ರಮದ ಜೊತೆಗೆ ಉರಿಯುವ ಜಯ ಘಂಟೆಯನ್ನು ಬಾರಿಸುತ್ತಿದ್ದರು. (ಹ.ಕಾ.ಸ್ಥ.3-19)

<u>ಪದಾತಿದಳ</u>:

ಪದಾತಿಯು ಉಳಿದ ಸೈನ್ಯಕ್ಕಿಂತ ಬಹುಸಂಖ್ಯೆಯುಳ್ಳಂತಕ್ಕ ದಳ. ಪದಾತಿದಳವು ಹಲವಾರು ರೀತಿಯ ಆಯುಧಗಳನ್ನು ಬಳಸುತ್ತದೆ.

"ಕಡಿತಲೆಯ ಕರಿಯ ಹರಿಗೆಯ ತುಳುವಪಡೆ ಕೂಡೆ
ಪಡಿತಳಿಸಿತೇಳುನಿರ್ಬಿಡದ ಕಠಾರಿಯ ಖಡ್ಗ
ವಿಡಿದ ಕಾಲಾಳು ಮೂವತ್ತೆರಡು ಖರ್ವ ಡೆಂಕಣಿಯವರು ನೂರುಕೋಟಿ
ಎಡೆವಿಡದೆ ಬಿಲ್ಲ ಮೋಹರಿಸಿತ್ತೈ ಪದ್ಮ ಹುಲು
ವಡೆಯ ಲೆಕ್ಕಿಸಲು ಬಾರದು ....."

(ಹ.ಕಾ.ಸ್ಥ.3-20)

ಕತ್ತಿ, ಗುರಾಣಿ, ಕಠಾರಿಗಳನ್ನು ಹಿಡಿದು ಕಾಲಾಳುಗಳು ಕಾದುತ್ತಿದ್ದರಲ್ಲದೆ ಕಲ್ಲುಗುಂಡುಗಳನ್ನು ತೂರಿ ಯುದ್ಧಮಾಡತಕ್ಕ ಕಾಲಾಳು ಇದ್ದರೆಂದು ತಿಳಿದು ಬರುತ್ತದೆ. ಅಲ್ಲದೆ ಭರ್ಜಿ, ಸೆಲ್ಲೆಹ, ಕೊಂತ, ಕಕ್ಕಡೆ ತ್ರಿಶೂಲ, ಪ್ರಬಲಗದೆ, ಸುರಗಿ, ಚಕ್ರ, ಮುದ್ಗರಗಳು ಮುಂತಾದ ಆಯುಧಗಳಿಂದ ಯುದ್ಧಮಾಡತಕ್ಕ ಕಾಲಾಳು 30 ಕೋಟಿ ಇದ್ದರೆಂದು ತಿಳಿಯುತ್ತದೆ. (ಹ.ಕಾ.ಸ್ಥ.5-4)

<u>ಅಶ್ವದಳ</u>:

ಮನಸಿನ ವೇಗದಲ್ಲಿ ಓಡುವ, ತೀಕ್ಷ್ಣ ಸ್ವಭಾವದ ಕುದುರೆಗಳು ಹರಿಶ್ಚಂದ್ರನ ಅಶ್ವದಳದಲ್ಲಿದ್ದುವು.

"ಹರಿಣನಂ ಹಳಿವ ಮಾರುತನನೇಳಿಸುವ ಹರಿ
ಸರಳನಣಕಿಸುವ ಮನದಿಂ ಮುಂದೆ ಲಂಘಿಸುವ
........ ವಾಜಿಗಳೆಯ್ದೆ ಬಾರಿವರಿದಾಡಿದವು ಶತಕೋಟಿಯು"

(ಹ.ಕಾ.ಸ್ಥ.3-21)

<u>ಆನೆಯ ದಳ</u>:

"ಗಿರಿಯನೀಡಿರಿವ ದಿಕ್ಕರಿಗಳಂ ಜರೆವ ದೇ
ವರಪತಿಯ ಗಜದ ಕೋಡಂ ಮುರಿವ ಸಂಭ್ರಮದ
ಕರಿಘಟೆಗಳೆಂಟುಕೋಟಿಯ ಮೇಲೆ ಮೂವತ್ತೆರಡುಲಕ್ಷ"

(ಹ.ಕಾ.ಸ್ಥ.3-22)

ಬೆಟ್ಟಗಳನ್ನು ಬಲವಾಗಿ ತಿವಿಯುವ, ದೇವೇಂದ್ರನ ಆನೆಯ ದಂತವನ್ನು ಮುರಿಯುವ ಎಂಟುಕೋಟಿಯ ಮೇಲೆ ಮೂವತ್ತೆರಡು ಲಕ್ಷ ಆನೆಗಳ ಕಾಲುಗಳಿಂದಲೇ ಭೂಮಿ ಮುಚ್ಚಿಹೋಗುತ್ತಿದ್ದ [illegible]

ಆನೆಯ ಸಂಖ್ಯೆಯನ್ನು ಹೇಳಿದ್ದಾನೆ.

<u>ರಥಗಳು</u>:

ಅರಸನ ರಥದ ಎಡಬಲಗಳಲ್ಲಿ ರಥಗಳನ್ನು ಓಡಿಸಲಾಗುತ್ತಿತ್ತು.

ಈ ರೀತಿಯಾಗಿ ರಾಘವಾಂಕನು ಸೈನ್ಯದಳದ ಸಂಖ್ಯೆ ಹಾಗು ವೈಶಿಷ್ಟ್ಯವನ್ನು ಹೇಳಿದ್ದಾನೆ. ಈತನ ಹೇಳಿಕೆಯಲ್ಲಿ ಉತ್ಪ್ರೇಕ್ಷೆಯು ಇಲ್ಲದಿರಲಾರದು.

ಕ) <u>ನ್ಯಾಯಾಂಗ</u>:

ರಾಜ್ಯಾಡಳಿತದಲ್ಲಿ ನ್ಯಾಯಾಂಗ ಅತಿ ಮಹತ್ವದ ಅಂಗ. ಸಮಾಜಘಾತಕ ವ್ಯಕ್ತಿಗಳನ್ನು ರಾಜಾಜ್ಞೆಯನ್ನುಲ್ಲಂಘಿಸಿದವರನ್ನು ಪ್ರಜಾಪೀಡಕರನ್ನು ಶಿಕ್ಷಿಸುವುದು ರಾಜನ ಮುಖ್ಯ ಕರ್ತವ್ಯವಾಗಿತ್ತು. ಪ್ರಾಚೀನ ಕರ್ನಾಟಕದಲ್ಲಿ ಹಲವು ವೇಳೆ ರಾಜನೇ ನ್ಯಾಯ ವಿಚಾರಣೆ ಮಾಡುತ್ತಿದ್ದನು. ನ್ಯಾಯ ನಿರ್ಣಯವು ತುಂಬ ಸೂಕ್ಷ್ಮವಾಗಿರುವುದರಿಂದ ಸಂಬಂಧಪಟ್ಟವರನ್ನೆಲ್ಲ ವಿಚಾರಿಸಲಾಗುತ್ತಿತ್ತು. ರಾಜನೇ ಸ್ವತಃ ವಿಚಾರಣೆ ನಡೆಸುತ್ತಿದ್ದರೂ ತೀರ್ಪಿನ ವಿಷಯವಾಗಿ ಧರ್ಮಾಧಿಕಾರಿಗಳ ನೆರವನ್ನು ಪಡೆಯು ತ್ತಿದ್ದನು. ಚಂದ್ರಮತಿಯು ಕಾಶಿರಾಜಕುಮಾರನನ್ನು ಹಣದ ಆಸೆಯಿಂದ ತಾನೇ ಕೊಲೆ ಮಾಡಿ ದ್ದಾಗಿ ನಿವೇದಿಸಿಕೊಂಡಾಗ ರಾಜನು,

> ''ಹೆದರದಿರು ತೆಕ್ಕದಿರು ಅಂಜದಿರು ಲೋಗರಿ
> ಟ್ಟುದೋ ನಿನ್ನ ಕೃತಕವೋ ಹೇಳು ಧರ್ಮಾಧಿಕರ
> ಣದವರು ಕರಸುವೆಂ ನುಡಿಸುವೆಂ ಕಾವೆನೆಂದವನಿಪಂ ಬೆಸಗೊಂಡಡೆ''
> (ಹ.ಕಾ.ಸ್ಥ.13-7)

ರಾಜನು ಮೇಲಿನಂತೆ ಹೇಳುವುದನ್ನು ನೋಡಿದರೆ ತುಂಬ ಜಟಿಲವಾದ ವಿವಾದಗಳನ್ನು ಬಗೆಹರಿಸಬೇಕಾದಗ ರಾಜನು ಸ್ವತಃ ವಿಚಾರಣೆಯನ್ನು ನಿರ್ವಹಿಸುತ್ತಿದ್ದರೂ ಪರಿಣತವ್ಯಕ್ತಿಗಳ ಸಹಾಯವನ್ನು ಪಡೆಯು ತ್ತಿದ್ದನೆಂದು ತಿಳಿಯುತ್ತದೆ.

1) <u>ಶಿಕ್ಷೆಯ ವಿಧಾನ</u>:

ವಿಚಾರಣೆ ಮಾಡಿ ಅಪರಾಧ ನಿರ್ಣಯವಾದ ಬಳಿಕ ತಪ್ಪಿತಸ್ಥರಿಗೆ ನಾಡಿನ ಶಾಸನಕ್ಕನುಗುಣವಾಗಿ ಶಿಕ್ಷೆಯನ್ನು ವಿಧಿಸುತ್ತಿದ್ದರು. ''ಅಪರಾಧಕ್ಕೆ ಶಿಕ್ಷೆ ತಪ್ಪಿದ್ದಲ್ಲ. ಆ ಊದ್ರ ಶಿಕ್ಷೆ ಉಗ್ರವಾಗಿಯೂ ಇರುತ್ತಿತ್ತು. ಕಳ್ಳತನ ಮಾಡಿದವರಿಗೆ ಕಾಲನ್ನೋ, ಕೈಯನ್ನೋ ಕತ್ತರಿಸಿ ಹಾಕುತ್ತಿದ್ದರು. ರಾಜದ್ರೋಹಿಗಳಿಗೆ ಗಲ್ಲು ಇಲ್ಲವೆ ಸಾರ್ವಜನಿಕ ಸ್ಥಳಗಳಲ್ಲಿ ತಲೆ ಕಡಿಸುವುದು ಮುಂತಾದ ಶಿಕ್ಷೆಗಳು ಇರುತ್ತಿದ್ದವು. ಆನೆಗಳ ಕಾಲಿಗೆ ಕಟ್ಟಿ ತುಳಿಸುವುದು ಇಲ್ಲವೆ ಎಳೆಸುವುದು, ಕಣ್ಣುಕೀಳಿಸುವುದು ಇತ್ಯಾದಿ

ಶಿಕ್ಷೆಗಳೂ ರೂಢಿಯಲ್ಲಿದ್ದವು..." (ತಿಪ್ಪೇರುದ್ರಸ್ವಾಮಿ :1985:190) ರಾಘವಾಂಕನು ಹರಿಶ್ಚಂದ್ರಕಾವ್ಯದಲ್ಲಿಯೂ ಕೆಲವು ಶಿಕ್ಷೆಯ ವಿಧಾನಗಳನ್ನು ಹೇಳಿದ್ದಾನೆ. ತಪ್ಪಿತಸ್ಥರಿಗೆ ಸ್ವತ: ಅರಸನೇ ಶಿಕ್ಷೆಯನ್ನು ವಿಧಿಸುತ್ತಿದ್ದುದನ್ನು ಹರಿಶ್ಚಂದ್ರಕಾವ್ಯದಲ್ಲಿ ಒಂದೆರಡು ಪ್ರಸಂಗಗಳಲ್ಲಿ ಕಾಣುತ್ತೇವೆ.

ರಾಜನನ್ನು ಮದುವೆಯಾಗೆಂದು ಪೀಡಿಸಿ ಗಾನಗಾರ್ತಿಯರು ಕೊನೆಗೆ ರಾಜನನ್ನು [illegible] ನಾಡಿನಲ್ಲಿ ಹೋಗುವೆವು ಎಂದಾಗ ಸಿಟ್ಟಿಗೆದ್ದ ರಾಜನು "ಹಲ್ಲ ಕಳೆ ಬಾಯ ಹರಿಯ ಕೊಯ್ ಹೊಡೆಹೊಡೆ" (ಹ.ಕಾ.ಸ್ಥ.7-24) ಎಂದು ಮಂತ್ರಿಗೆ ಹೇಳುತ್ತ ಚಮ್ಮಟಿಗೆಯನ್ನು ತೆಗೆದು ಕೊಂಡು ಗಾನಗಾರ್ತಿಯರನ್ನು ಸ್ವತ: ರಾಜನೇ ಬೆನ್ನಟ್ಟಿದನು.

"ತುಡುಕಿ ಚಮ್ಮಟಿಗೆಯಂ ಸೆಳೆದು ಪ್ರಧಾನ ಬಳಿ
ವಿಡಿದೇಳಲೊಬ್ಬರೊಬ್ಬರನು ಬೆನ್ನೊಡೆಯೆ ಮುಡಿ
ಹುಡಿಯೊಳಗೆ ಹೊರಳೆ ಹಲು ಬೀಳೆ ಬಾಯೊಡೆಯೆ ಮೆಯ್ ನೋಯೆ
ಕಯ್ಯುಳುಕೆವಾರೆ
ನಡೆದಲ್ಲಿ ನಡೆದು ಹೊಕ್ಕಲ್ಲಿ ಹೊಕ್ಕೋಡಿ ಹೋ
ದೆಡೆಗೆ ಬೆನ್ನಟ್ಟಿ ರುಧಿರಂ ಬಸಿಯೆ ಹೊಯ್ಯುದ ಹೊಗ
ರುಡುಗಲರಸಂ......

(ಹ.ಕಾ.ಸ್ಥ.7-25)

ಹೀಗೆ ಚಮ್ಮಟಿಯಿಂದ ಸ್ವತ: ರಾಜನೇ ತಪ್ಪಿತಸ್ಥರನ್ನು ಹೊಡೆಯುತ್ತಿದ್ದನು. ತಪ್ಪು ಮಾಡಿದವರಿಗೆ "ಕಡಹಿ ಮೂಗನರಿದೆಳೆಹೂಟೆಯಂ ಕಟ್ಟಿ ಹೆಟ್ಟವೆಳಸುವೆ ಬಟ್ಟಬಯಲೊಳ್" ಎಂದು (ಹ.ಕಾ.ಸ್ಥ.8-13) ಎಳೆಹೂಟೆ ಶಿಕ್ಷೆಯನ್ನು ಕೊಡುತ್ತಿದ್ದುದರ ಉಲ್ಲೇಖ ಸಿಗುತ್ತದೆ.

"......... ಕೊಂದರಂ
ಕೊಂದು ಕಳೆವುದೆ ಧರ್ಮ ಜಗವರ್ತಿಯಂ ಹೊತ್ತಿಸೆಳೆಹೂಟೆಯಂ ಹೂಡಿಸು
ಸಂದುಸಂದಂ ಕಡಿಸು ಕಿವಿಮೂಗನರಿ ಸಬಳ
ದಿಂದ ತಿವಿ.........."

(ಹ.ಕಾ.ಸ್ಥ.13-8)

ಹೀಗೆ ಎಳೆಹೂಟೆ, ಕೊಂದವರನ್ನು ಕೊಲ್ಲುವುದು, ಸಂದುಸಂದನ್ನು ಕಡಿಸುವುದು, ಕಿವಿ ಮೂಗನ್ನು ಕತ್ತರಿಸುವುದು, ಭರ್ಚಿಯಿಂದ ತಿವಿಸುವುದು ಇವೆ ಮೊದಲಾದವು ರಾಘವಾಂಕನ ಕಾಲದಲ್ಲಿ ಕೊಡತಕ್ಕ ಸಾಮಾನ್ಯ ಶಿಕ್ಷೆಯ ವಿಧಾನಗಳಾಗಿದ್ದವು.

<u>ಮರಣ ದಂಡನೆ</u>:

ಎಲ್ಲ ಶಿಕ್ಷೆಗಳಿಗಿಂತ ಕ್ರೂರವಾದುದು ಮರಣದಂಡನೆ. ಈ ದಂಡನೆಯನ್ನು ಅತ್ಯಂತ [illegible] ಹೀನವೂ ಆದ ಅಪರಾಧಕ್ಕೆ ವಿಧಿಸುತ್ತಿದ್ದರು. ನೇಣು ಹಾಕಿಯಾಗಲಿ, ಕತ್ತನ್ನು [illegible]

ಯಾಗಲಿ ವಧೆ ಮಾಡುತ್ತಿದ್ದರು. ಕತ್ತಿಯಿಂದ ಕತ್ತನ್ನು ಕತ್ತರಿಸುವ ರೀತಿಯು ಹರಿಶ್ಚಂದ್ರ ಕಾವ್ಯದಲ್ಲಿ ಉಕ್ತವಾದ ವಧಾವಿಧಾನ. ವಧೆಗೆ ಒಳಗಾದ ಚಂದ್ರಮತಿಯನ್ನು,

“ಕಡೆಮುಟ್ಟೆ ಕೈಗಳ ಸೇದಿ ಬೆಂಗೆ ಬಾ
ಗಿಸಿ ಬಿಗಿದು ಹೆಡಗಯ್ಯನೇಣಿಂದ ಹೊಡೆಯುತ್ತ”

(ಹ.ಕಾ.ಸ್ಥ.13—10)

ರುದ್ರಭೂಮಿಗೆ ಕರೆತರಲಾಯಿತು. ಅಲ್ಲಿ ಅವಳ ಕೈಗೆ ಕಟ್ಟಿದ್ದ ಹಗ್ಗವನ್ನು ಕತ್ತರಿಸಿ, ಎತ್ತರವಾದ ದಿಣ್ಣೆಯಲ್ಲಿ ಅವಳನ್ನು ಪೂರ್ವದಿಕ್ಕಿಗೆ ಮುಖಮಾಡಿ ಕುಳ್ಳಿರಿಸಿ ಶಿರಚ್ಛೇದನ ಮಾಡುವುದಕ್ಕಿಂತ ಪೂರ್ವದಲ್ಲಿ ತನ್ನ ದೈವವನ್ನು ಸ್ಮರಿಸಿ, ಅರಸನನ್ನು ಹರಸಬೇಕಾಗುತ್ತಿತ್ತು. (ಹ.ಕಾ.ಸ್ಥ.13—12) ಮರಣಕ್ಕೊಳಗಾಗುವ ವ್ಯಕ್ತಿಯು ಸಾಯುವ ಮುಂಚೆ ಶ್ಮಶಾನದ ಒಡೆಯನನ್ನು ಹರಸಬೇಕಾಗಿದ್ದ ರೂಢಿ — ಅದು ಇತ್ತೆಂದು ಹರಿಶ್ಚಂದ್ರಕಾವ್ಯದ ಮೂಲಕ ತಿಳಿಯುತ್ತದೆ. ತಾನು ಮರಣಕ್ಕೊಳಗಾಗುತ್ತಿರುವುದು ತನ್ನ ಅಪರಾಧಕ್ಕೆ ಶಿಕ್ಷೆಯಾಗಿಯೇ ವಿನಾ ಬೇರೆಯದಕ್ಕಲ್ಲ. ರಾಜನು ನ್ಯಾಯಕ್ಕಾಗಿ ತನಗೆ ಮರಣದಂಡನೆಯನ್ನು ವಿಧಿಸಿದ್ದಾನೆಯೇ ಹೊರತು ಬೇರೆಯ ಕಾರಣಕ್ಕಲ್ಲ ಎಂಬುದನ್ನು ಸೂಚಿಸಲು ಈ ಪದ್ಧತಿಯು ರೂಢಿಯಲ್ಲಿರಬೇಕು ಎನ್ನುವ ಪಿ.ವಿ.ನಾರಾಯಣರ ಮಾತು (1983:229) ಸಮಂಜಸವೆನಿಸುತ್ತದೆ. ಮರಣದಂಡನೆಗೆ ಗುರಿಯಾದ ವ್ಯಕ್ತಿಯನ್ನು ವಧೆ ಮಾಡುವ ಶ್ಮಶಾನದ ಕಾವಲುಗಾರನೇ ‘ಹೊಲೆಯ’ ನಾಗಿರುವುದು ವಾಡಿಕೆ.

ಆಕರಗಳು:


1) ನಾರಾಯಣ ಪಿ.ವಿ. :1983: ವಚನ ಸಾಹಿತ್ಯ—ಒಂದು ಸಾಂಸ್ಕೃತಿಕ ಅಧ್ಯಯನ, ವೀರಶೈವ ಅಧ್ಯಯನ ಸಂಸ್ಥೆ, ಗದಗ.

2) ಶಿವರುದ್ರಪ್ಪ ಜಿ.ಎಸ್. :1967: ಪರಿಶೀಲನ: ಉಷಾ ಸಾಹಿತ್ಯ ಮಾಲೆ ಮೈಸೂರು.

3) ತಿಪ್ಪೇರುದ್ರಸ್ವಾಮಿ ಎಚ್. :1985: ಋಷಿಕವಿ ರಾಘವಾಂಕ: ಡಿ.ವಿ.ಕೆ.ಮೂರ್ತಿ ಮೈಸೂರು.

4) ತಿಪ್ಪೇರುದ್ರಸ್ವಾಮಿ ಎಚ್. :1985: ಕರ್ನಾಟಕ ಸಂಸ್ಕೃತಿ ಸಮೀಕ್ಷೆ: ಡಿ.ವಿ.ಕೆ.ಮೂರ್ತಿ, ಮೈಸೂರು.

5) ಸೂರ್ಯನಾರಾಯಣ ಎಲ್.ವಿ. :1988: ರಾಘವಾಂಕ ಒಂದು ಅಧ್ಯಯನ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

# ಆರ್ಥಿಕ ವ್ಯವಸ್ಥೆ

## ಕಾಯಕ ನಿಷ್ಠೆ:

ಕಾಯಕವೆಂದರೆ ಜೀವನ ನಿರ್ವಹಣೆಗಾಗಿ ಪ್ರತಿಯೊಬ್ಬ ವ್ಯಕ್ತಿಯು ಮಾಡತಕ್ಕ ಕೆಲಸ. ಈ ಕೆಲಸ ಪ್ರಾಮಾಣಿಕವಾಗಿರಬೇಕು, ಸತ್ಯಶುದ್ಧವಾಗಿರಬೇಕು, ಸಂಗ್ರಹಪ್ರವೃತ್ತಿಗೆಡೆ ಮಾಡಿಕೊಡಬಾರದು. ಆಗ ಮಾತ್ರ ಈ ಕೆಲಸ 'ಕಾಯಕ' ಎನಿಸಿಕೊಳ್ಳುತ್ತದೆ. ಬಸವಣ್ಣನ ಮಾತಿನಲ್ಲಿ ಸಂಕ್ಷಿಪ್ತೀಕರಿಸಿ ಹೇಳುವುದಾದರೆ ಕಾಯಕವೆಂಬುದು ''ತನು ಮನ ಬಳಲಿಸಿ ತಂದು ದಾಸೋಹವ ಮಾಡು'' ವುದು. ದೇಹ–ಮನಸ್ಸುಗಳ ಶ್ರಮದಿಂದ ದ್ರವ್ಯವನ್ನು ಸಂಪಾದಿಸುವ ವೃತ್ತಿಯು ಶ್ರದ್ಧೆ–ಭಕ್ತಿಗಳಿಂದ ಕೂಡಿರಬೇಕು. ಇಲ್ಲಿ ವ್ಯಕ್ತಿಯು ಮಾಡುವ ವೃತ್ತಿಯು ಕೇವಲ ಹಣಸಂಪಾದನೆಯೇ ಗುರಿಯಾಗಿ ಉಳಿಯಲಿಲ್ಲ; ಹಣಸಂಪಾದನೆಯೇ ಮುಖ್ಯೋದ್ದೇಶವಾದರೆ ವೃತ್ತಿಗೆ ತಾತ್ವಿಕ ಬುನಾದಿಯಿಲ್ಲದಂತಾಗುತ್ತದೆ. ಹೀಗಾಗಿ ಅದರ ನಿರ್ವಹಣೆಯಲ್ಲಿ ವ್ಯಕ್ತಿಯ ನೈತಿಕ ಹೊಣೆಯು ಕುಸಿಯುತ್ತದೆ. ಮಾಡುವ ಕೆಲಸದಲ್ಲಿಯೇ ಕೈಲಾಸವನ್ನು ಕಾಣಬೇಕು, ಅದುವೆ ಆಧ್ಯಾತ್ಮಿಕೋನ್ನತಿಗೆ ಮಾರ್ಗವಾಗಬೇಕು. ''ಶ್ರದ್ಧೆ–ಭಕ್ತಿಗಳಿಂದ ಮಾಡಿದ ತನ್ನ ವೃತ್ತಿಯೇ ತನಗೆ ಮೋಕ್ಷವೀಯುವುದೆಂಬ ನಂಬಿಕೆಯಿಂದ ಕಾಯಕವನ್ನು ಮಾಡುವವನಿಗೆ ಹೊಣೆಗಾರಿಕೆಯು ಹೆಚ್ಚುತ್ತದೆ, ವೃತ್ತಿಯ ಬಗ್ಗೆ ಪೂಜ್ಯತೆಯುಂಟಾಗುತ್ತದೆ.'' (ನಾರಾಯಣ :1983:171) ಕಾಯಕದಲ್ಲಿಯ ಈ ಶ್ರದ್ಧೆಯೇ ಬಲಗೊಂಡು ನಿಷ್ಠೆಯಾಗಿ ಪರಿಣಮಿಸುತ್ತದೆ. ಅದುವೇ ಕಾಯಕ ನಿಷ್ಠೆಯೆನಿಸಿಕೊಳ್ಳುತ್ತದೆ.

ಸರ್ವರಾಜ್ಯವನ್ನು ಮುನಿಗೆ ಅರ್ಪಿಸಿಕೊಂಡು ನಿರ್ಗತಿಕನಾಗಿ ತನ್ನನ್ನು ವೀರಬಾಹುಕನಿಗೆ ಮಾರಿಕೊಂಡು ಹೊಲೆಯನ ಆಳಾಗಿ ಮಾಡತಕ್ಕ ಕೆಲಸದಲ್ಲಿ ಈ ಕಾಯಕದ ಅರ್ಥವನ್ನು ಹಾಗು ಕಾಯಕ ನಿಷ್ಠೆಯನ್ನು ಕಾಣಬಹುದು. ಹರಿಶ್ಚಂದ್ರನು ಒಮ್ಮೆ ತನ್ನನ್ನು ಮಾರಿಕೊಂಡು ಹೊಲೆಯನ ಆಳಾದ ಮೇಲೆ ಆತನ ನಿಷ್ಠೆಯಲ್ಲಿ ಎಲ್ಲಿಯೂ ಒಡಕು ಕಾಣುವುದಿಲ್ಲ.

''ಏಳಬುದ್ಧಿ ಕಡೆಯಾದ ಸರ್ವರಾಜ್ಯಶ್ರೀಯ
ಮೇಳದೊಳು ವೀರಸಿರಿಯಂ ವಿಜಯಸಿರಿಗಳಂ
ತಾಳಲಾರ್ಪದಟುಳ್ಳ ಭುಜವನಾಮಿಕನ ಪದಭಾರಕ್ಕೆ ಬಸವಳಿವುದೇ
ಕಾಳಗದೊಳರಿನೃಪರ ಖಂಡಮಂ ರುಧಿರಮಂ
ಕಾಳಿಜವನಡಗನೊಳ್ಗರುಳು ತಿಣಿಲಂ ಹೊರುವ
ಬಾಳ ಪಡೆದಿಪ್ಪನೀ ಹೇಯಕ್ಕೆ ಹೇಸುವನೆ ಎನಿಸಿ ಲೆಕ್ಕಿಸದಿರ್ದನು''

(ಹ.ಕಾ.ಸ್ಥ 11-32)

ಸಪ್ತದ್ವೀಪಗಳ ಅಧಿಪತಿಯಾಗಿದ್ದಂಥ, ರವಿಕುಲಜನಾಗಿರತಕ್ಕ, ವೀರಸಿರಿಯ, ವಿಜಯಸಿರಿಗಳನ್ನ ತಾಳಲಾರ್ಪದಟುಳ ಹರಿಶ್ಚಂದ್ರನ, ಭುಜಗಳು ವೀರಬಾಹುಕನ ಕಾಲುಗಳ ಭಾರವನ್ನು ಹೊರಲಾರವೆ?, ರಣರಂಗದಲ್ಲಿ ವೈರಿಗಳ ಕರುಳ ಬಗಿದು ರಕ್ತವನ್ನ ಚೆಲ್ಲಾಡತಕ್ಕ ಬಾಳನ್ನ ಪಡೆದಿರತಕ್ಕ ಹರಿಶ್ಚಂದ್ರನು ವೀರಬಾಹುಕನ ಮನೆಯ ಪರಿಸರಕ್ಕೆ ಹೇಸುವನೇ? ಎಂದು ರಾಘವಾಂಕನು ಹೇಳುವಲ್ಲಿ ಹರಿಶ್ಚಂದ್ರನ ಸೇವಾ ನಿಷ್ಠೆ ವ್ಯಕ್ತವಾಗುತ್ತದೆ. ಹೀಗೆ ಹರಿಶ್ಚಂದ್ರನು ಹೊಲೆಯನ ಮನೆಯ ಯಾವ ಪರಿಸರಕ್ಕೂ ಹೇಸದೆ ವೀರಬಾಹುಕನ ಕಾಲನ್ನು ಹೆಗಲ ಮೇಲೆ ಹೊತ್ತು ಸೇವೆ ಮಾಡುತ್ತಾನೆ. ಸುಡುಗಾಡನ್ನು ಕಾಯುವ ಕೆಲಸದಲ್ಲಿ ತೃಪ್ತಿಯನ್ನು ಕಾಣುತ್ತಾನೆ. ವೀರಬಾಹುಕನು ಹೇಳಿದ ಸ್ಮಶಾನದಕಟ್ಟಳೆಗಳನ್ನು ಚಾಚೂ ತಪ್ಪದೆ ಪಾಲಿಸುತ್ತಾನೆ. ಕಾಯ್ದೆ-ಕಟ್ಟಳೆಗಳನ್ನು ಅನ್ಯರ ವಿಷಯದಲ್ಲಿ ಪಾಲಿಸುವುದು ಬಹು ಸುಲಭ. ಆದರೆ ಅದೇ ಕಾಯ್ದೆಗಳನ್ನು ತನ್ನ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದಂಥ ಸನ್ನಿವೇಶದಲ್ಲಿ ಪಾಲಿಸುವುದು ಬಹು ಕಷ್ಟ. ಇಂತಹ ವೇಳೆಯಲ್ಲೂ ಪಾಲಿಸಿದ್ದೆ ಆದರೆ ಅದು ನಿಷ್ಠೆ ಎನ್ನಿಸಿಕೊಳ್ಳುತ್ತದೆ.

ಹರಿಶ್ಚಂದ್ರನ ಇಂತಹ ಕಾಯಕನಿಷ್ಠೆಯನ್ನು ಆತನ ಮಗ ಮಡಿದಂಥ ಪ್ರಸಂಗ ಹಾಗು ಅಪವಾದವನ್ನು ಹೊತ್ತ ಚಂದ್ರಮತಿಯ ಶಿರಚ್ಛೇದನ ಮಾಡತಕ್ಕ ಸಂದರ್ಭಗಳಲ್ಲಿ ಕಾಣಬಹುದು.

ಸ್ಮಶಾನ ಕಾಯುವ ಕಾಯಕವನ್ನು ಕೈಕೊಂಡ ಹರಿಶ್ಚಂದ್ರನು ಪ್ರತಿಹೆಣದ ಮೈಮೇಲಿನ ಬಟ್ಟೆ, ನೆಲದೆರಗೆ, ತಲೆಯ ಅಕ್ಕಿಯನ್ನು ಪಡೆದುಕೊಳ್ಳುವುದು ಆತನ ಕರ್ತವ್ಯವಾಗಿತ್ತೆನ್ನುವುದು ಈ ಕೆಳಗಿನ ಪದ್ಯದಿಂದ ಧ್ವನಿತವಾಗುತ್ತದೆ.

‘‘ಸುಡಗಾಡ ಕಾಹವೆಂದೇನದರ ಪಂಥಮಂ
ನುಡಿದು ಪೇಳೆನೆ ಸುಡುವ ನೆಲದೆರೆಗೆ ಹಾಗ ಹಣ
ದುಡುಗೆಯುಂ ತಂದೆನಗೆ ಕೊಡುವುದಾ ತಲೆಯಕ್ಕಿಯುಂ ನಿನ್ನ ಸಂಬಳಕ್ಕೆ
ಪಡಿಯಾಗಿ ಕೊಂಡುಂಬುದಳುಪದಿರು ಹುಸಿಯದಿರು
ಬಿಡದಿರೆಂದುಡುಗೊರೆಯ ವೀಳೆಯದ ಕೂಡೆ ತಾ
ಪಿಡಿದ ಸಂಬಳಿಗೋಲ ಮುದ್ರೆಗೊಟ್ಟಂ ವನಧಿಮುದ್ರಿತಧರಾಧಿಪತಿಗೆ’’
(ಹ.ಕಾ.ಸ್ಥ –11–20)

ಎಂದು ವೀರಬಾಹುಕನು ಕಾಯಕದ ಪ್ರತಿಫಲವಾಗಿ ಆತನು ಪಡೆದುಕೊಳ್ಳತಕ್ಕ ವಸ್ತುವನ್ನು ಹೇಳಿ ಆತನ ಕರ್ತವ್ಯದಲ್ಲಿ ಯಾವುದೇ ರೀತಿಯ ಮೋಸಕ್ಕೆ ಹುಸಿಗೆ ಅವಕಾಶ ಮಾಡಿಕೊಡಬೇಡೆಂದು ಎಚ್ಚರಿಸುವನು. ಹರಿಶ್ಚಂದ್ರನ ಈ ಕಾಯಕ ನಿಷ್ಠೆಯನ್ನು ಪರೀಕ್ಷಿಸತಕ್ಕ ಸನ್ನಿವೇಶ ಬಂದೊದಗುತ್ತದೆ. ದಾಸಿಯಾದ ಚಂದ್ರಮತಿಯು, ರಾತ್ರಿವೇಳೆಯಲ್ಲಿ ನೆಲದೆರೆಗೆಯನ್ನಾಗಲಿ, ಹಣದುಡಿಗೆಯನ್ನಾಗಲಿ, ತಲೆಯಕ್ಕಿಯನ್ನಾಗಲಿ ಕೊಡದೆ ತನ್ನ ಮಗನನ್ನು ಶ್ಮಶಾನದಲ್ಲಿ ಸುಡಲು ಸಿದ್ಧಳಾಗಿದ್ದಾಳೆ. ಆಗ ಅಲ್ಲಿಗೆ ಬಂದ ಹರಿಶ್ಚಂದ್ರನಿಗೆ ಸತ್ತವನು ತನ್ನ ಮಗನೆಂದು ತಿಳಿದು ಪಿತೃಸಹಜವಾದ ವೇದನೆಯಿಂದ ಸತ್ತ ಮಗನಿಗಾಗಿ ಕಣ್ಣೀರ ಕೋಡಿ ಹರಿಸುತ್ತಾನೆ. ತನ್ನ ಮಗನು ಮುಂದೆ ಇಕ್ಷ್ವಾಕುವಂಶವನ್ನು ಮುಂದುವರಿಸಿ ತ್ರಿಶಂಕು ಮಹಾರಾಜನಂತೆ ರಾಜ್ಯಭಾರ ಮಾಡಬೇಕೆಂಬ ಕನಸು ನುಚ್ಚುನೂರಾಯಿತು. ಅದಕ್ಕಾಗಿ ಓರಂತೆ ಮರುಗುತ್ತಾನೆ. ಆದರೂ ಅಂತಹ ದುಃಖಾವೇಶದಲ್ಲಿಯೂ ಕರ್ತವ್ಯಪ್ರಜ್ಞೆ ಆತನನ್ನು ಎಚ್ಚರಿಸುತ್ತದೆ.

‘‘....... .. ... .. ತೇರೆಯನಿ
ಕ್ಕದೆ ಸುಡಲಾಪ್ಪರದುಳ್ಳಡೆ ಕೊಡಿಲ್ಲದಡೆ ಬೇ
ಗದಿ ಹೋಗಿ ನಿನ್ನೊಡೆಯನಂ ಬೇಡಿ ತಾ ತಾರದಿರೆ ಸುಡಲ್ಬೀಡೆಂದನು’’
(ಹ.ಕಾ.ಸ್ಥ. 12–55)

ಹರಿಶ್ಚಂದ್ರನು ಚಂದ್ರಮತಿಗೆ ನೆಲದೆರೆಗೆಯನ್ನು ಕೊಟ್ಟಲ್ಲದೆ ಸುಡಲುಬಾರದು ಎಂದು ಹೇಳುವಲ್ಲಿ ಅವನ ನಿಷ್ಠೆ ವ್ಯಕ್ತವಾಗುತ್ತದೆ. ರಾತ್ರಿವೇಳೆ ಶವವನ್ನು ಸುಟ್ಟಿದ್ದರೆ ಆಗುತ್ತಿತ್ತು. ಆದರೆ ತನ್ನ ಒಡೆಯನ ಅಪ್ಪಣೆಯನ್ನು ಪಾಲಿಸುವಲ್ಲಿ ವಂಚನೆಗೆ ಅವಕಾಶವನ್ನು ಕೊಡಬಾರದೆಂದು ಆತನ ನಿಷ್ಠೆ ಎಚ್ಚರಿಸುತ್ತದೆ. ಆದ್ದರಿಂದಲೇ ಉಳ್ಳಡೆ ಕೊಡು ಇಲ್ಲದಿದ್ದರೆ ನಿನ್ನ ಒಡೆಯನನ್ನು ಬೇಡಿ ತಾ ಎನ್ನುವನು. ಅಕಸ್ಮಾತ್ ಆತನು ಕೊಡದಿದ್ದರೆ ಮಗನನ್ನು ಸುಡಲು ನೀನು ಬರಬೇಡವೆಂದು ಕಠಿಣವಾಗಿಯೇ ನುಡಿಯುವಲ್ಲಿ ಹರಿಶ್ಚಂದ್ರನ ಕರ್ತವ್ಯನಿಷ್ಠೆ ವ್ಯಕ್ತವಾಗುತ್ತದೆ.

‘‘ಒಡೆಯರೀವವರಲ್ಲೆನಲೆ ಬೇಡಿ ನೋಡು ಕೊಡ
ದೆಡೆ ಋಣಂಬಡು ಋಣಂ ಹುಟ್ಟದಿರ್ದಡೆ ಸುಡುವ
ಗೊಡವೆ ಬೇಡೆನ್ನಗಂ ಬಂದನಿತು ಬರಲೆಂದು ತರುಣನುಟ್ಟುದನು ಕೊಂಡು
ಪೊಡವೀಶ್ವರಂ ತಿರುಗಿ ತನ್ನ ಕಾಪಿನ ಗುಡಿಗೆ
ನಡೆಗೊಂಡನ.......’’ (ಹ.ಕಾ.ಸ್ಥ. 12–56)

ಹರಿಶ್ಚಂದ್ರನು ಚಂದ್ರಮತಿಗೆ ಮಗನ ಶವಸಂಸ್ಕಾರಕ್ಕೆ ನೆಲದೆರೆಗೆಂದಾಗಿ ಹಣವನ್ನು ಒಡೆಯನಲ್ಲಿ ಕೇಳಿ ನೋಡೆಂದು ಹೇಳುವನು. ಏಕೆಂದರೆ ತೊತ್ತಿಗೆ ಯಾವುದೇ ರೀತಿಯ ಸ್ವಾತಂತ್ರ್ಯವಿದ್ದಿಲ್ಲ. ಅವರು ತಮ್ಮಲ್ಲಿ ಹಣವನ್ನಿಟ್ಟುಕೊಳ್ಳುವುದಾಗಲಿ ಅಥವಾ ಅವರವೇ ಆದಂಥ ಯಾವ ವಸ್ತುವನ್ನು ಅವರು ಇಟ್ಟುಕೊಳ್ಳುವಂತಿಲ್ಲ. ಆದ್ದರಿಂದಲೇ ಹರಿಶ್ಚಂದ್ರನು ಒಡೆಯರನ್ನೆ ಕೇಳಿ ನೋಡು. ಅವರು ಇಲ್ಲವೆಂದರೆ ಎಲ್ಲಿಯಾದರೂ ಸಾಲವನ್ನು ಮಾಡು. ಕೊನೆಗೆ ಸಾಲವೂ ಸಿಗದಿದ್ದರೆ ಮಗನನ್ನು ಸುಡುವ ಗೊಡವೆಯೇ ಬೇಡ ಎಂದು ಹೇಳುವಷ್ಟರ ಮಟ್ಟಿಗೆ ಮನಸ್ಸನ್ನು ಕಠಿಣವಾಗಿಸಿ ತನ್ನ ಕರ್ತವ್ಯದಲ್ಲಿ ನಿಷ್ಠೆಯನ್ನು ತೋರುವನು' 'ಋಣಂ ಹುಟ್ಟದಿರ್ದಡೆ ಸುಡುವ ಗೊಡವೆ ಬೇಡೆನ್ನಗಂ ಬಂದನಿತು ಬಳಲೆಂದು ತರುಣನುಟ್ಟುದನು ಕೊಂಡು' ಹರಿಶ್ಚಂದ್ರನು ತನ್ನ ಕಾವಲು ಗುಡಿಗೆ ಹೋಗುವನು. ಮಗನ ಸಾವು ಒಂದೆಡೆ, ಆ ಮಗನ ಶವಸಂಸ್ಕಾರಕ್ಕಾಗಿ ನೆಲದೆರೆಗೆಯನ್ನು ತೆತ್ತಲಾರದೆ ಪರದಾಡುತ್ತಿರುವ ಪತ್ನಿಯ ದುಃಖ ಇವೆರಡರ ಮಧ್ಯೆ ಜರ್ಜರಿತನಾದ ಹರಿಶ್ಚಂದ್ರ ಇಂಥ ಪ್ರಸಂಗದಲ್ಲಿಯೂ ಕೂಡ 'ಬಂದನಿತು ಬರಲೆಂದು ತರುಣನುಟ್ಟುದನು ಕೊಂಡೆ ಹೋದನು'' ಎನ್ನುವಲ್ಲಿ ಆತನ ಕರ್ತವ್ಯನಿಷ್ಠೆ ಧ್ವನಿತವಾಗುತ್ತದೆ.

ಹೀಗೆ ಅವನು ತನ್ನ ಮಡದಿ ಮಗನಿಗಾಗಿ ದುಃಖಿಸಬಲ್ಲನೆ ಹೊರತು ಶುಲ್ಕವಿಲ್ಲದೆ ಸುಡಲು ಅಪ್ಪಣೆಯನ್ನು ಕೊಡಲೊಲ್ಲದ ಕರ್ತವ್ಯನಿಷ್ಠ. ''ಈ ಇಡೀ ಸನ್ನಿವೇಶ ರಾಘವಾಂಕನಲ್ಲಿ ಮಾತ್ರ ಬಂದಿದ್ದು ಮಗನ ಸಾವಿನ ಸಂದರ್ಭದಲ್ಲಿಯೂ ಆತನ ಕರ್ತವ್ಯಪ್ರಜ್ಞೆ ಎಷ್ಟರಮಟ್ಟಿಗೆ ನಿಷ್ಕಳಂಕವಾಗಿತ್ತು ಎಂಬುದನ್ನು ತೋರಿಸಲು ಕಲ್ಪಿಸಿಕೊಂಡಿದ್ದಾನೆ.''(ಸೂರ್ಯನಾರಾಯಣ:1988:178) ರಾಘವಾಂಕನ ಸ್ವಂತಿಕೆಯನ್ನು ಇಲ್ಲಿ ಕಾಣುತ್ತೇವೆ.

ಮುಂದೆ ಇದಕ್ಕಿಂತ ಕಠಿಣವಾದ ಪ್ರಸಂಗ ಬರುತ್ತದೆ. ತೆರವನ್ನು ತರಲು ಹೋದ ಚಂದ್ರಮತಿಯು ಕಾಶಿ ರಾಜನ ಮಗನನ್ನು ಕೊಂದ ಆಪಾದನೆಗೆ ಗುರಿಯಾಗಿ ಶಿರಚ್ಛೇದನ ಶಿಕ್ಷೆಗೆ ಒಳಗಾಗಿ ಶ್ಮಶಾನಕ್ಕೆ ಎಳೆತರುವಂತಹವಳಾಗುತ್ತಾಳೆ. ದುಃಖದ ಬರದಲ್ಲಿ ಹರಿಶ್ಚಂದ್ರನಿಗೆ ಆಪಾದಿತೆಯು ಚಂದ್ರಮತಿಯೇ ಎಂದು ಗೊತ್ತಾಗುವುದಿಲ್ಲ. ವಧಿಸುವ ಸಮಯದಲ್ಲಿ ಅವಳ ಹರಕೆಯನ್ನು ಕೇಳಿ ಹೌಹಾರುತ್ತಾನೆ. ''ಅಂಥ ವಿಷಮ ಸ್ಥಿತಿಯಲ್ಲಿಯೂ ವಿಶ್ವಾಮಿತ್ರನ ಪ್ರಲೋಭನೆಯ ನಡುವೆಯೂ ಕರ್ತವ್ಯದಿಂದ ವಿಮುಖನಾಗುವುದಿಲ್ಲ. ದೇವೀಭಾಗವತದಂತೆ ಹೇಡಿಯಂತೆ ಅಗ್ನಿಪ್ರವೇಶ ಮಾಡಲು ಬಯಸುವುದಿಲ್ಲ.''
(ಸೂರ್ಯನಾರಾಯಣ:1988:178).

''..... ಭೂಪರೆ ವಿಧಿಯ ಮುಳಿಸೆ ಹೋ
ದಿರುಳೆನ್ನ ಸುತನ ದುರ್ಮರಣಮಂ ತೋರಿ ಕಯ್ಯೊಡನೆ ಮತ್ತೀಗಳೆನ್ನ
ವರಸತಿಯ ತಲೆಯನಾನೆನ್ನ ಕೈಯಾರೆ ಕಡಿ
ದರಿವಂತೆ ಮಾಡಿದೆಯದಕ್ಕೆ ನಾನಿನಿತು ಹೇ
ವರಿಸುವವನಲ್ಲ ಪತಿಯಾಜ್ಞೆಯುಳಿದಡೆ ಸಾಕೆನುತ್ತ ಕೊಲಲನುವಾದನು.
(ಹ.ಕಾ.ಸ್ಥ.13-15)

ಭಾಪುರೆ ವಿಧಿಯ ಮುಳಿಸೆ' ಎಂಬ ಹರಿಶ್ಚಂದ್ರನ ನುಡಿಯು ತನ್ನ ಗತ ಜೀವನವನ್ನು ಸಿಂಹಾವಲೋಕನಕ್ರಮಗೈದು ನುಡಿದಂತಿದೆ. ಉತ್ತಮ ರವಿಕುಲದಲ್ಲಿ ಜನಿಸಿ, ಸಪ್ತದ್ವೀಪಗಳ ಅಧಿಪತಿಯಾಗಿ ರಾಜ್ಯಭಾರ ಮಾಡಿದಂಥ ತಾನು ಮುನಿಯ ಮಾತಿನ ಬಲೆಗೆ ಸಿಲುಕಿ ಸರ್ವರಾಜ್ಯವನ್ನು ದಾನಮಾಡಿ ಮಡದಿ ಮಕ್ಕಳನ್ನು ಮಾರಿ ಕೊನೆಗೆ ತನ್ನನ್ನು ತಾನು ಮಾರಿಕೊಂಡು ಹೊಲೆಯನ ಆಳಾಗಿ ಜೀವಿಸತಕ್ಕಂಥ ಚಿತ್ರಣ ಒಮ್ಮೆಲೆ ಆತನ ಸ್ಮೃತಿಪಟಲದ ಮೇಲೆ ಮೂಡಿದೆ. ಇಷ್ಟಕ್ಕೆಲ್ಲಾ ಕಾರಣವಾದ ವಿಧಿಗೆ 'ಭಾಪುರೆ ವಿಧಿಯ ಮುಳಿಸೆ' ಎಂದು ವಿಧಿಗೆ ಶಹಭಾಸ್ ಹೇಳುವನು. ವಿಧಿಯ ಮುಳಿಸು ತನ್ನ ಕುಟುಂಬದ ಸದಸ್ಯರನ್ನೆಲ್ಲ ದೂರಮಾಡಿದಲ್ಲದೆ, ಹಿಂದಿನ ದಿನ ರಾತ್ರಿ ಮಗನ ದುರ್ಮರಣಕ್ಕೆ ಕಾರಣವಾಯಿತು. ಈಗ ವರಸತಿಯ ತಲೆಯನ್ನು ತನ್ನ ಕೈಯಾರೆ ಕೊಲ್ಲುವಂತೆ ಮಾಡಿದೆ. ತನ್ನ ಹೆಂಡತಿ ಮಕ್ಕಳ ಸಾವನ್ನು ಯಾರೂ ಅಪೇಕ್ಷಿಸುವುದಿಲ್ಲ. ಆದರೆ ಶಿಕ್ಷೆಗೆ ಗುರಿಯಾಗಿ ಬೇರೆಯವರಿಂದ ಕೊಲ್ಲಲ್ಪಟ್ಟರೂ ಅಂಥ ಯಾತನೆ ಸಹನೀಯ. ಆದರೆ ವಿಧಿಯು ಹರಿಶ್ಚಂದ್ರನ ಪಾಲಿಗೆ ಎಂಥ ಭಯಾನಕವಾಗಿದೆ ಎಂದರೆ 'ವರಸತಿಯ ತಲೆಯನ್ನು ಹರಿಶ್ಚಂದ್ರನು ತನ್ನ ಕೈಯಾರೆ ಕಡಿಯುವಂತೆ ಒಳಸಂಚು ಮಾಡಿದೆ. ಅದಕ್ಕಾಗಿಯೇ ಆತ ವಿಧಿಗೆ 'ಭಾಪುರೆ ವಿಧಿಯ ಮುಳಿಸೆ' ಎಂದು ಹೇಳಿದ್ದು. ಇಂಥ ಸಮಯದಲ್ಲಿ ಅಳ್ಳೆದೆಯವರು ಯಾರಾದರೂ ಆಗಿದ್ದರೆ ತತ್ವಕ್ಕೆ ತಿಲಾಂಜಲಿಯನ್ನಿತ್ತು ಸತಿ-ಸುತರನ್ನು ಉಳಿಸಿಕೊಳ್ಳುತ್ತಿದ್ದರು. ಆದರೆ ''ಕಿಡಿಕಿಡಿ ಕೆದರಿದಡೆ ಎನಗೆ ಮಜ್ಜನವೆಂಬೆನು. ಶಿರಹರಿದು ಬಿಟ್ಟಡೆ ಪ್ರಾಣನಿನಗರ್ಪಿತವೆಂಬೆನು'' ಎಂಬ ನಿಷ್ಠೆಯುಳ್ಳ ಹರಿಶ್ಚಂದ್ರನು ''ಇದಕೆ ನಾನಿನಿತು ಹೇವರಿಸುವವನಲ್ಲ ಪತಿಯಾಜ್ಞೆಯುಳಿದಡೆ ಸಾಕೆನುತ್ತ ಕೊಲಲನುವಾದನು''.

ಕಾಯಕ ನಿಷ್ಠೆಯೆಂದರೆ ಇದು. ಸತಿಸುತರ ಸಾವನ್ನು ಕೂಡ ತೃಣೀಕರಿಸಿ ಕಾಯಕವೇ ಕೈಲಾಸವೆಂದು ಕರ್ತವ್ಯನಿರತನಾಗುತ್ತಾನೆ ಹರಿಶ್ಚಂದ್ರ. ಆದ್ದರಿಂದಲೇ ಆತನ ಹೆಸರು ಚಿರಸ್ಥಾಯಿಯಾದುದು. ಅಂತೆಯೇ ಕೊಲಲೆತ್ತಿದ ಖಡ್ಗದ ಬಾಯಲ್ಲಿ ಶಿವನ ಸಾಕ್ಷಾತ್ಕಾರವಾಯಿತು. ಹರಿಶ್ಚಂದ್ರನ ಕಾಯಕ ನಿಷ್ಠೆಗೆ ದೊರಕಿದ ಗೆಲುವದು. ಶರಣರ ಕ್ರಾಂತಿಯ ನಂತರ ಬಂದ ರಾಘವಾಂಕನು ಅವರು ಪ್ರತಿಪಾದಿಸಿದ ಮೌಲ್ಯಗಳನ್ನು ತನ್ನ ಕಾವ್ಯದಲ್ಲಿ ಕೆಲವೊಂದನ್ನು ಪ್ರತಿಪಾದಿಸಿದ್ದಾನೆ. ಅದರಲ್ಲಿ ಕಾಯಕ ತತ್ವವು ಒಂದು.

''ಭಾರ್ಯೆಯನ್ನು ಕೊಲ್ಲುವುದು ಭರ್ತನಿಗೆ ಸಂತೋಷವೇ? ಮಗನ ಶವಕ್ಕೆ ಸಂಸ್ಕಾರದ ಅವಕಾಶವನ್ನು ನಿರಾಕರಿಸುವುದು ತಂದೆಗೆ ಹಿತವೆ? ಆದರೆ ಈ ಎಲ್ಲ ಕರ್ತವ್ಯಗಳೂ ಸತ್ಯನಿಷ್ಠೆಗೆ ಅಧೀನ. ಈ ಹೊತ್ತಿನಲ್ಲಿ ಹರಿಶ್ಚಂದ್ರ ಸ್ವತಂತ್ರನಲ್ಲ. ಸ್ವಾತಂತ್ರ್ಯವಿಲ್ಲದವನಿಗೆ ಪಾಪ ಯಾವುದು? ಪುಣ್ಯ ಯಾವುದು? ಒಡೆಯನ ಅಪ್ಪಣೆಯನ್ನು ಚಾಚು ತಪ್ಪದೆ ನಡೆಸುವುದರಲ್ಲಿಯೆ ಅವನ ಎಲ್ಲ ಧರ್ಮವೂ ನಿಂತಿದೆ. ಇದನ್ನು ಹರಿಶ್ಚಂದ್ರ ಚೆನ್ನಾಗಿ ಅರಿತುಕೊಂಡಿದ್ದ. ಆದ್ದರಿಂದಲೇ ಅವನು ವಿಶ್ವಾಮಿತ್ರ

ಎಂತಹ ಆಶೆ ತೋರಿಸಿದರೂ ಕರ್ತವ್ಯಚ್ಯುತನಾಗಲಿಲ್ಲ. ಅವನು ತನ್ನ ಸತ್ಯವ್ರತವನ್ನು ಚೆನ್ನಾಗಿ ಪರಿಪಾಲಿಸಿಕೊಂಡೆ ಅವನ ನಿಷ್ಠೆ ಫಲಿಸಿತು... (ವೆಂಕಟರಾಮಪ್ಪ:1975:48)

## ಸಾಲ ಮತ್ತು ಅದನ್ನು ತೀರಿಸುವ ಪದ್ಧತಿ:

ಸಾಲವೆಂದರೆ ಒಬ್ಬರಿಂದ ಹಣವನ್ನಾಗಲಿ, ಅಥವಾ ಯಾವುದೇ ವಸ್ತುವನ್ನಾಗಲಿ ಮತ್ತೆ ಮರಳಿ ಕೊಡುವ ಷರತ್ತಿನ ಮೇಲೆ ಪಡೆಯುವುದು. ಪ್ರಾಚೀನ ಕಾಲದಲ್ಲಿ ಸರ್ಕಾರವಾಗಲೀ ಇತರ ಸಾರ್ವಜನಿಕ ಸಂಸ್ಥೆಗಳಾಗಲಿ ಸಾಲವ್ಯವಹಾರವನ್ನು ನಡೆಸದೇ ಇದ್ದುದರಿಂದ ಜನರು ಸಾಲಕ್ಕಾಗಿ ಶ್ರೀಮಂತರನ್ನೇ ಆಶ್ರಯಿಸಬೇಕಾಗಿತ್ತು. ಇದರಿಂದ ಸಾಲಕೊಡುವವನಿಗೂ, ಸಾಲಪಡೆಯುವವನಿಗೂ ಲಾಭವಾಗುತ್ತಿತ್ತು. ಹರಿಶ್ಚಂದ್ರನು ಇಲ್ಲಿ ಈ ರೀತಿಯಾಗಿ ಮುನಿಯಿಂದ ಯಾವ ರೀತಿಯ ಸಾಲವನ್ನು ಪಡೆದಿಲ್ಲ. ಸುವರ್ಣಯಾಗವನ್ನು ಮಾಡಿದಾಗ ಮುನಿಗೆ

"ಪಿರಿಯಕರಿಯುಂ ಮೆಟ್ಟಿ ಕವಡೆಯುಂ ಮಿಡಿದೊಡೆನಿತುದ್ದಮಂ ಪೋಪುದದರ
ಸರಿಯೆನಿಸಿ ಸುರಿದ ಹೊಸ ಹೊನ್ನ ರಾಸಿಯನು" (ಹ.ಕಾ.ಸ್ಥ.3-7)

ದಾನವಾಗಿ ಕೊಟ್ಟಿದ್ದಾನೆ. ವಿಶ್ವಾಮಿತ್ರನು ಅದನ್ನು ಅಲ್ಲಿಯೇ ಬಿಟ್ಟು ಹೋಗಿದ್ದನು. ಹರಿಶ್ಚಂದ್ರನನ್ನು ಮಾತಿನ ಬಲೆಯಲ್ಲಿ ಸಿಕ್ಕಿಸಿ ಆತನಿಂದ ಸರ್ವರಾಜ್ಯವನ್ನು ಪಡೆದುಕೊಂಡಿದ್ದಾನೆ. ಹಿಂದೆ ತನಗೆ ದಾನವಾಗಿ ಕೊಟ್ಟ ಹೊನ್ನಿನ ರಾಶಿಯನ್ನು ಕೊಡಲು ವಿಶ್ವಾಮಿತ್ರನು ಕೇಳುವನು. ದಾನವಾಗಿ ಕೊಟ್ಟ ಹೊನ್ನಿನ ರಾಶಿಯೇ ಈಗ ಹರಿಶ್ಚಂದ್ರನಿಗೆ ಸಾಲವಾಗಿ ಪರಿಣಮಿಸಿದೆ.

ಸರ್ವರಾಜ್ಯವನ್ನು ಮುನಿಗೆ ಅರ್ಪಿಸಿ ಅಡವಿಗೆ ಹೊರಟು ನಿಂತಂಥ ಹರಿಶ್ಚಂದ್ರನಿಗೆ ವಿಶ್ವಾಮಿತ್ರನು

"..... ಬಹುಸುವರ್ಣಯಾಗವ ಮಾಡಿದಂದು ನೀನು
ಎನಗೆ ದಕ್ಷಿಣೆಯಿತ್ತ ಧನವನೀವುದು ದೇಶ
ವನು ಬಿಟ್ಟು ಹೋಹಾತನನ್ಯಸಾಲವನು ನೆ
ಟ್ಟನೆ ಹೊತ್ತು ಹೋಗಲಾಗದ ನಿಲಿಸಲಾಗದಿತ್ತಡಿಯನಿಡು ಬಳಿಕೆಂದನು"
(ಹ.ಕಾ.ಸ್ಥ.8-52)

ದೇಶವನ್ನು ಬಿಟ್ಟು ಹೋಗತಕ್ಕ ವ್ಯಕ್ತಿ ಮರಳಿ ಬರುತ್ತಾನೆನ್ನುವುದು ನಿಶ್ಚಿತವಿಲ್ಲ. ಆದ್ದರಿಂದ ಮುನಿ ಹರಿಶ್ಚಂದ್ರನಿಗೆ ಹೇಳುವನು. ದೇಶವನ್ನು ಬಿಟ್ಟು ಹೋಗತಕ್ಕವನು ಅನ್ಯಸಾಲವನು ಹೊತ್ತುಕೊಂಡು ಹೋಗಬಾರದು. ಅದನ್ನು ಮರಳಿ ಬಂದ ನಂತರ ಕೊಡುತ್ತೇನೆಂದರೂ ಕೊಡಲು ಒಂದೊಂದು ಸಲ ಸಾಧ್ಯವಾಗದು. ಏಕೆಂದರೆ ಈಗಿನ ಹಾಗೆ ಪ್ರಾಚೀನಕಾಲದಲ್ಲಿ ಸಾರಿಗೆ ಸೌಲಭ್ಯಗಳಿರಲಿಲ್ಲ. ಮಾರ್ಗದಲ್ಲಿ ಯಾವುದಾದರೂ ಕಾಡುಮೃಗಗಳಿಗೆ ತುತ್ತಾಗತಕ್ಕ ಸಂಭವವುಂಟು. ಇದನ್ನೆಲ್ಲ ಗಮನದಲ್ಲಿಟ್ಟುಕೊಂಡೇ ವಿಶ್ವಾಮಿತ್ರನು ಹರಿಶ್ಚಂದ್ರನಿಗೆ ಸಾಲವನ್ನು ಹೊತ್ತುಕೊಂಡು

ಹೋಗಬೇಡೆಂದೂ, ಮರಳಿ ಬರುವ ಖಚಿತತೆ ಇಲ್ಲದ್ದಕ್ಕಾಗಿಯೇ ಅದನ್ನು ಕೊಟ್ಟಿಲ್ಲವೆ ಒಂದು ಹೆಜ್ಜೆಯನ್ನು ಮುಂದೆ ಇಡಬೇಡೆಂದು ಹೇಳುವನು.

"ಒಡಲಳಿದಡಂ ಸಾಲವಳಿಯದೆನಲೀ ಧರಣಿ
ಯೊಡೆತನಂ ಹೋದಡೇಂ ಸಾಲ ಹೋಹುದೆ ಮುನ್ನ
ನೊಡವೆಯುಂ ಕೊಡು ಕೊಡದೊಡೆಲ್ಲವಂ ಮರಳಿ ಕೈಕೊಳು ಬಿಡೆ
—ಬಡೆನೆಂದನು. (ಹ.ಕಾ.ಸ್ಥ.8–53)

ರಾಜತ್ವ ಹೋದರೇನು, ಕೊನೆಗೆ ಸಾಲಿಗನು ಇಹಲೋಕವನ್ನೇ ತ್ಯಜಿಸಿದರೂ ಕೊಟ್ಟ ಸಾಲವನ್ನು ತೀರಿಸಲೇಬೇಕು. ಅಂತಹ ಕಟ್ಟುಕಟ್ಟಳೆ ಅಂದಿನ ಸಮಾಜದಲ್ಲಿದ್ದಿರಬಹುದು. ಇದು ವಿಶ್ವಾಮಿತ್ರ "ಒಡಲಳಿದಡಂ ಸಾಲವಳಿಯದೆನಲೀ ಧರಣಿಯೊಡೆತನಂ ಹೋದಡೇಂ ಸಾಲ ಹೋಹುದೇ?" ಎನ್ನುವ ಮಾತಿನಿಂದ ಸ್ಪಷ್ಟವಾಗುತ್ತದೆ. ಸಾಲವನ್ನು ಪಡೆದುಕೊಂಡ ವ್ಯಕ್ತಿ ತನಗೆ ಎಂತಹ ಕಷ್ಟ ಬಂದರೂ ಕೊನೆಗೆ ತಾನು ಸತ್ತರೂ ಸಾಲವನ್ನು ತೀರಿಸಲೇಬೇಕೆಂಬ ಕಟ್ಟುನಿಟ್ಟಾದ ಪದ್ಧತಿ ಅಂದಿನ ಕಾಲದಲ್ಲಿತ್ತು. ಅದಕ್ಕೆ ರಾಘವಾಂಕನ ಹರಿಶ್ಚಂದ್ರನು ಬದ್ಧನಾದುದು ಇಲ್ಲಿ ವ್ಯಕ್ತವಾಗುತ್ತದೆ.

<u>ಸಾಲ ತೀರಿಸುವ ಪದ್ಧತಿ</u>:

ಸಾಲವನು ತಕ್ಷಣ ತೀರಿಸಲು ಆಗದಿದ್ದರೆ ತೀರಿಸಲು ಗಡುವು ಕೇಳಿ ಪಡೆದುಕೊಳ್ಳುತ್ತಿದ್ದರು.

" . . . . . . ಅವಧಿಯುಂ ಕೊಟ್ಟು
ಚಿತ್ರವಿಟ್ಟನುಸರಿಸಿ ಕೊಂಡಿರಾದಡೆ ತಂದು ನಿರ್ವ್ಯಸಿಕೊಡುವೆನು"
(ಹ.ಕಾ.ಸ್ಥ.8–55)

ಎಂದು ನಾಲ್ವತ್ತೆಂಟು ದಿನದ ಗಡುವನ್ನು ಪಡೆದನು. ಸಾಲ ತೀರಿಸುವುದಕ್ಕಾಗಿ ಹಣ ಸಂಪಾದನೆ ಮಾಡಲು ವಿಶ್ವಾಮಿತ್ರನು ಕೆಲವೊಂದು ನಿಯಮಗಳನ್ನು ಹೇಳುವನು. ಸರ್ವರಾಜ್ಯವನ್ನು ಮುನಿಗೆ ಅರ್ಪಿಸಿದ ನಂತರ ಅದೆಲ್ಲ ವಿಶ್ವಾಮಿತ್ರನ ಸೊತ್ತು. ಅಲ್ಲಿ ರಾಜನಿಗೆ ಯಾವುದೇ ಹಕ್ಕಿಲ್ಲ. ಆತನ ರಾಜ್ಯದಲ್ಲಿ ಹರಿಶ್ಚಂದ್ರನು ಯಾವುದೇ ರೀತಿಯ ಕಾಯಕ ಮಾಡಿ ಧನಾರ್ಜನೆ ಮಾಡಕೂಡದು. ಏಕೆಂದರೆ ಪ್ರಜೆಗಳ ಪ್ರೀತಿಯನ್ನು ಸಂಪಾದಿಸಿದಂತಹ ಹರಿಶ್ಚಂದ್ರನಿಗೆ ಪ್ರಜೆಗಳು ಸಹಾಯ ಮಾಡಬಹುದೆಂಬ ದೂರಾಲೋಚನೆ ಮತ್ತು ದುರಾಲೋಚನೆ ಎರಡೂ ಸೇರಿದಂತಹ ವಿಶ್ವಾಮಿತ್ರನು ಹರಿಶ್ಚಂದ್ರನಿಗೆ ಈ ರೀತಿ ಕಟ್ಟಪ್ಪಣೆ ವಿಧಿಸುವನು.

"ಮೇಲಿನ್ನು ನಾನಾಳ್ವ ದೇಶದೊಳು ಬೇಡದಂ
ತೋಲೈಸದಂತೆ ಕೃಷಿ ವ್ಯವಸಾಯಮಂ ಮಾಡ
ದಾಲಯಂಗಟ್ಟಿರದೆಯವಧಿಯೊಳು ಹೊನ್ನ ನಿರ್ಣಯಿಸುವುದು ಬೇಗವೆನಲು
ಭೂಲೋಲನದ ಕೊಡಂಬಡಲು ಸಪ್ತದ್ವೀಪ
ಜಾಲವೆಲ್ಲನ್ನವವರಿಂದ ಹೊರಗಾವುದಂ
ದಾಲಿಸಲು ಹೇಮಕೂಟಂ ವಾರಣಾಸಿಗಳು ಹೊರಗು ಮುನಿ ಕೇಳೆಂದನು"
(ಹ.ಕಾ.ಸ್ಥ.8–58)

ಸಪ್ತದ್ವೀಪವೆಲ್ಲವು ಈಗ ವಿಶ್ವಾಮಿತ್ರನ ಅಧೀನವಾಗಿದೆ. ಹೇಮಕೂಟ ಮತ್ತು ವಾರಣಾಸಿ ಮಾತ್ರ ಯಾರ ಅಧೀನದಲ್ಲಿಲ್ಲವೆಂದು ಅಲ್ಲಿ ತಾನು ಹಣ ಸಂಪಾದನೆ ಮಾಡಿ ತಂದುಕೊಡುವೆನೆಂದು ತಿಳಿಸುವನು.

ಸಂಪಾದಿಸಿ ಸಾಲ ತೀರಿಸಲು ಆಗದಿದ್ದರೆ ತಮ್ಮ ಮಡದಿ ಮಕ್ಕಳನ್ನು ಮಾರಿಯಾದರೂ ಸಾಲ ತೀರಿಸಬೇಕಾಗಿತ್ತು. ಹರಿಶ್ಚಂದ್ರನು ಮುನಿಯ ಸಾಲವನ್ನು ತೀರಿಸಲು ಕಾಶಿಯಲ್ಲಿ 'ಸತಿಸುತರ ತಲೆಗಳ ಹುಲುಗಟ್ಟಿ' (ಹ.ಕಾ.ಸ್ಥ.11-5) ಮಾರಾಟ ಮಾಡಿದನು. ಹೀಗೆ ಮಾರಾಟ ಮಾಡಬೇಕಾದರೆ ಅವರ ತಲೆಯ ಮೇಲೆ ಹುಲ್ಲನ್ನಿಡುವ ಪದ್ಧತಿ ಇತ್ತೆಂಬುದು ತಿಳಿಯುತ್ತದೆ. ಹರಿಶ್ಚಂದ್ರನು ಕೊನೆಗೆ ತನ್ನನ್ನು ಮಾರಿ ಮುನಿಯ ಸಾಲವನ್ನು ತೀರಿಸಿದನು. ಸಾಲ ತೀರುವವರೆಗೆ ಸಾಲಿಗರಿಗೆ ಭದ್ರವಾದ ಕಾವಲನ್ನಿಟ್ಟಿರುತ್ತಾರೆ ಎನ್ನುವುದು ಈ ಪದ್ಯದಿಂದ ವಿದಿತವಾಗುತ್ತದೆ.

"ಅಕ್ಕರಿಂದಲ್ಲ ನೀನೋಡಿ ಹೋಹೆಯೆಂಬ
ಕಕ್ಕುಲಿತೆಗೇಳೆಂದೆನ್ನಸೆಯೆನೆ ಬಲುಗಾಹ
ನಿಕ್ಕಯ್ಯ ಎನೆ ಕಾಹಿನವರು ನಿನ್ನವರೆಂದಡವರು ಬೇಡಯ್ಯ ನಿನ್ನ
ಮಕ್ಕಳಹ ಮುನಿಗಳಂ ಬೆಸಸೆನಲು ಬೆಸಸಿ" (ಹ.ಕಾ.ಸ್ಥ.8-68)

ಸಾಲಿಗನಾದ ಹರಿಶ್ಚಂದ್ರನು ಮುನಿಜನರ ಕಾವಲಿನಲ್ಲಿ ಅಯೋಧ್ಯೆಗೆ ಬಂದನು ಎಂದು ಹೇಳುವಲ್ಲಿ ಅಂದಿನ ಕಾಲದಲ್ಲಿ ಸಾಲಿಗರಿಗೆ ಭದ್ರವಾದ ಕಾವಲನ್ನು ವಿಧಿಸಿರುತ್ತಿದ್ದುದು ಸ್ಪಷ್ಟವಾಗುತ್ತದೆ.

ಸಾಲ ಕೊಟ್ಟವನು ಸಾಲವನ್ನು ವಸೂಲಿ ಮಾಡಲು ತೆರಕಾರರನ್ನು ನೇಮಿಸುವ ಪದ್ಧತಿ ಇತ್ತು. ವಿಶ್ವಾಮಿತ್ರನು ನಕ್ಷತ್ರಕನನ್ನು ಸಾಲವನ್ನು ವಸೂಲಿ ಮಾಡಲು ತೆರಕಾರನನ್ನಾಗಿ ನಿಯಮಿಸಿದನು.

"ಒಸೆದೀವ ತೆರಕಾರನಾರಾತನಂ ನಿಯಾ
ಮಿಸು ತಂದೆ ಎನೆ ತನ್ನ ಶಿಷ್ಯಾಳಿಯೊಳು ನೋಡಿ
ಹುಸಿಯಸೂಯಾ ನೀಚವೃತ್ತಿ ನಿರ್ದಾಕ್ಷಿಣ್ಯ ನಿಷ್ಕರುಣ ನೀತಿಗಳೆಂ
ಹೆಸರುಳ್ಳ ಹಿರಿಯ ನಕ್ಷತ್ರಕನೆನಿಪ್ಪ ಮಾ
ನಸನನಕ್ಕಟಿಗರೆದು ಕೈವಿಡಿದು, ಕಿವಿಯೊಡ್ಡಿ
ವಸುಧಾಧಿಪತಿ ಬಳಿಗೆ ಕಳುಹಲು......" (ಹ.ಕಾ.ಸ್ಥ.9-19)

ಈ ತೆರಕಾರನಿಗೆ ದಿನಭತ್ತೆಯನ್ನು ಕೊಡುವ ಪದ್ಧತಿ ಇತ್ತೆನ್ನುವುದು ಈ ಪದ್ಯದ ಮೂಲಕ ವಿದಿತವಾಗುತ್ತದೆ.

" ಆಂ ಬಂದ ದಿನ ಮೊದಲಿಂದುತನಕೆನ್ನ
ಹಿಂದುಳಿದ ಬತ್ತಾಯ ಬಂದುದು......" (ಹ.ಕಾ.ಸ್ಥ.11-8)

ಎಂದು ಸತಿಸುತರನ್ನು ಮಾರಿ ಬಂದ 40 ಸಾವಿರ ಹೊನ್ನನ್ನು ತನ್ನ ಹಿಂದುಳಿದ 'ಬತ್ತಾಯ'ವೆಂದು ನಕ್ಷತ್ರಕನು ತೆಗೆದುಕೊಳ್ಳುವನು. ಕೊನೆಗೆ ಹರಿಶ್ಚಂದ್ರನು ತನ್ನನ್ನು ಮಾರಿಕೊಂಡು ವಿಶ್ವಾಮಿತ್ರನ ಸಾಲವನ್ನು ತೀರಿಸುವನು.

ಹೀಗೆ ರಾಘವಾಂಕನು ಹರಿಶ್ಚಂದ್ರನು ಮುನಿಗೆ ಕೊಡಬೇಕಾದ ದಾನದ ಹಣದ ನೆಪದಲ್ಲಿ ಅಂದು ರೂಢಿಗತವಾಗಿದ್ದ ಸಾಲದ ಪದ್ಧತಿಯನ್ನು ತಿಳಿಸುವನು.

<u>ಅರಸು ಸಂಪತ್ತು</u>:

ವಿಶ್ವಾಮಿತ್ರ ಮುನಿಗೆ ಹರಿಶ್ಚಂದ್ರನು ತನ್ನ ಸರ್ವ ರಾಜ್ಯವನ್ನು ಸಮರ್ಪಿಸುವಾಗ ರಾಘವಾಂಕನು ಅರಸು ಸಂಪತ್ತನ್ನು ಕುರಿತು ಹೇಳುವನು.

"...... ಚತುರಂಗ
ಸೇನೆಯಂ ಸಕಲ ಭಂಡಾರವಂ ನಿಜರಾಜ
ಧಾನಿಯಂ ಜಗದಾಣಿ ಘೋಷಣೆಯುಮಂ ಕಟಕವನು ಸಪ್ತದ್ವೀಪಂಗಳ"
(ಹ.ಕಾ.ಸ್ಥ.8-47)

ಸರ್ವೇಸಾಮಾನ್ಯವಾಗಿ ಚತುರಂಗಬಲ, ಅರಸು ಪರಿವಾರ, ದೇಶ-ಕೋಶ, ಕಟಕ ಕುಲಕರಣ ಬಿರುದಿನ ಮುದ್ರೆ, ದುರ್ಗದ ಮುದ್ರೆ ಮೊದಲಾದವುಗಳನ್ನು ಅರಸು ಸಂಪತ್ತೆಂದು ಭಾವಿಸಲಾಗುತ್ತಿತ್ತು.

"ಇದು ರತ್ನಭಂಡಾರವಿದು ಹೇಮಭಂಡಾರ
ವಿದು ಸುನಾಣೆಯ ವರ್ಗವಿದು ಪಟ್ಟಕರ್ಮಕುಲ
ವಿದು ಬೆಳ್ಳಿಯುಗ್ರಾಣವಿದು ಕಂಚಿನುಗ್ರಾಣವಿದು ಸರ್ವಶಸ್ತ್ರಶಾಲೆ
ಇದು ಹಸ್ತಿಸಂದೋಹವಿದು ತುರಗಸಂತಾನ
ವಿದು ವರೂಥ ಪ್ರಕಾರವಿದು ಪದಾತಿವ್ರಾತ
ವಿದು ನೋಡಿಕೊಳ್ಳೆಂದೆನುತೊಪ್ಪಿಸಿದನಾ ಮುನಿಗೆ ಭೂನಾಥಕಂದರ್ಪನು"
(ಹ.ಕಾ. ಸ್ಥ.9-3)

ಎಂದು ಆಳರಸರ ಸಂಪತ್ತನ್ನು ಹೇಳುವನು.

ಹರಿಶ್ಚಂದ್ರ ರಾಜ್ಯದಲ್ಲಿ ಅಪಾರ ಸಂಪತ್ತಿತ್ತೆನ್ನುವುದು ಈ ಪದ್ಯವು ಸ್ಪಷ್ಟಪಡಿಸುತ್ತದೆ.

"ಅನುಗೆಟ್ಟ ಮರುಳೆ ನೀನೆಂದಲ್ಪದಕ್ಷಿಣೆಯ
ಧನವೆನಿತು ನಿನ್ನ ಮನದಾರ್ತವೆನಿತರೊಳ್ಳವು
ದನಿತರ್ಥವದೆ ಮೊದಲ ಭಂಡಾರದೊಳಗೆ"...... (ಹ.ಕಾ.ಸ್ಥ.8-63)

ನೀನು ಬಯಸಿದಷ್ಟು ಸಂಪತ್ತು ಮೊದಲ ಭಂಡಾರದಲ್ಲಿದೆ ಎಂದು ವಿಶ್ವಾಮಿತ್ರನಿಗೆ ಹರಿಶ್ಚಂದ್ರನು ಹೇಳುವಲ್ಲಿ ಆತನ ಅಗಣತ ಸಂಪತ್ತಿನ ಲೆಕ್ಕ ಸಿಗುವುದು ಅಸಾಧ್ಯ. ಮೊದಲ ಭಂಡಾರದಲ್ಲಿಯೇ ಅಷ್ಟು ಅಪಾರವಾದ ಸಂಪತ್ತಿದ್ದರೆ ಇನ್ನುಳಿದ ಭಂಡಾರದಲ್ಲಿ ಎಷ್ಟು ಸಂಪತ್ತು ಇದ್ದಿರಬೇಕು?.

<u>ಅಳತೆ ಮಾಪನಗಳು</u>:

ಧನ-ಧಾನ್ಯಗಳನ್ನು ಅಳೆಯುವುದಕ್ಕೂ ಭೂಮಿಯ ಕ್ಷೇತ್ರವಿಸ್ತಾರವನ್ನು ಅಳೆಯುವುದಕ್ಕೂ

ವಿವಿಧ ಬಗೆಯ ಮಾಪನ ದಂಡಗಳನ್ನು ರಾಘವಾಂಕನು ತನ್ನ ಕಾವ್ಯದಲ್ಲಿ ಹೆಸರಿಸುವನು.

.......... ದಿನರಾತ್ರಿಗಳ
ನಳೆದು ಹೊಲ ಮೇರೆಯಲಿ ನಡಲೆಯ ವರುಣ ನಿಲ್ಲಿಸಿದ ಹವಳದೊಂದುನರಿಯಾ''
(ಹ.ಕಾ.ಸ್ಥ.3-71)

ಎನ್ನುವಲ್ಲಿ ಹೊಲಗಳನ್ನು ಅಳೆದು ಕಲ್ಲುಗಳನ್ನು ನೆಡುವ ಪದ್ಧತಿ ರಾಘವಾಂಕನ ಕಾಲದಲ್ಲಿಯೂ ತಿಳಿಯುತ್ತದೆ. ಭೂಮಿಯ ಉದ್ದಳತೆಯನ್ನು ಅಳೆಯಲು 'ಯೋಜನ' ಗಳೆಂಬ ಅಳತೆ ಮಾಪನಗಳನ್ನು ರಾಘವಾಂಕನ ಕಾಲದಲ್ಲಿ ಬಳಸುತ್ತಿದ್ದರು.

.......... ದೆಸೆದೆಸೆಯೊಳೊಂದು ಯೋ
ಜನ ಮಾಡ ಕಿನ್ನರೇಶಂ................'' (ಹ.ಕಾ.ಸ್ಥ.5-63)

<u>ನಾಣ್ಯಗಳು</u>:

ರಾಘವಾಂಕನು ಹರಿಶ್ಚಂದ್ರ ಕಾವ್ಯದಲ್ಲಿ 'ಹಾಗ' ಮತ್ತು 'ಸುನ್ನಾಣಿ' ಎಂದು ತನ್ನ ಸಮಕಾಲೀನದಲ್ಲಿ ಚಲಾವಣೆಯಲ್ಲಿದ್ದ ನಾಣ್ಯಗಳನ್ನು ಹೆಸರಿಸುವನು.

''ಸುಡುಗಾಡ ಕಾಹವೆಂದೇನದರ ಪಂಥಮಂ
ನುಡಿದು ಪೇಳೆನೆ ಸುಡುವ ನೆಲದೆಂಗೆ ಹಾಗ,......'' (ಹ.ಕಾ.ಸ್ಥ.11-36)

............. ಹೆಣನುಟ್ಟುದಂ
ಮಸಣವಾಡಗೆಯ ಹಾಗವನು ಕೊಟ್ಟಲ್ಲದೇನೆಂದಡಂ ಬಿಡೆನೆಂದನು''
(ಹ.ಕಾ.ಸ್ಥ.12-37)

ಎಂದು ಹರಿಶ್ಚಂದ್ರ ಕಾವ್ಯದಲ್ಲಿ 'ಹಾಗ' ಶಬ್ದದ ಪ್ರಯೋಗ ಕಂಡು ಬರುತ್ತದೆ. ವಚನಕಾರರಲ್ಲಿಯೂ ಈ 'ಹಾಗ' ಶಬ್ದದ ಬಳಕೆಯಿದೆ. 'ಹಾಗ' ವು ಅತ್ಯಂತ ಚಿಕ್ಕ ನಾಣ್ಯವೆಂದು ತಿಳಿದು ಬರುತ್ತದೆ. ಅಂದು ಚಲಾವಣೆಯಲ್ಲಿದ್ದ ಅಧಿಕೃತ ನಾಣ್ಯವನ್ನು ''ಸುನಾಣಿ'' (ಹ.ಕಾ.ಸ್ಥ.9-[illegible]) ಎಂದು ಕರೆದಿದ್ದಾನೆ.

<u>ತೆರಿಗೆಗಳು</u>:

ರಾಜ್ಯಾದಾಯಗಳಲ್ಲಿ ತೆರಿಗೆಗಳು ಒಂದಾಗಿತ್ತು. ''ರಾಜನ ಆದಾಯದ ಬಹುಭಾಗವು ತೆರಿಗೆಗಳಿಂದ ಬರುತ್ತಿದ್ದಿತು. ರಾಜನು ದೇಶವನ್ನು ರಕ್ಷಿಸುವುದಕ್ಕೆ ಪ್ರಜೆಗಳು ಬಂದಿಯಾಗಿ ಕೊಡುವ ವೃತ್ತಿ ಫಲವೇ ತೆರಿಗೆಯೆಂದು ಗೌತಮ ಸಂಹಿತೆ ನಾರದ ಸಂಹಿತೆ ಮುಂತಾದ ಸ್ಮೃತಿಗಳು ಸ್ಥಾಪಿಸುತ್ತವೆ.'' (ಉದ್ಧೃತ).

ಕನ್ನಡ ನಾಡಿನ ರಾಜರ ಚರಿತ್ರೆಯ ಅಧ್ಯಯನದಿಂದ ರಾಜರು ಹಲವಾರು ರೀತಿಯ ತೆರಿಗೆಗಳನ್ನು ಹಾಕುತ್ತಿದ್ದರೆನ್ನುವುದು ತಿಳಿದುಬರುತ್ತದೆ.

"1) <u>ಅಟ್ಟದೆರೆ</u>: ಅಟ್ಟವನ್ನು ಹೊಂದಿದ್ದಕ್ಕೆ ಅಂದರೆ ಮನೆಗೆ ಮಾಳಿಗೆಯನ್ನು ಹಾಕಿಸಿಕೊಂಡದ್ದಕ್ಕೆ ತೆರಿಗೆ.

2) <u>ಅರುವಣ</u>: ದತ್ತಿಯಾಗಿ ಬಿಟ್ಟುಕೊಟ್ಟ ತೋಟಕ್ಕೋ, ಹೊಲಕ್ಕೋ, ಇಷ್ಟು 'ಅರುವಣ' ವನ್ನು ಕೊಡಬೇಕೆಂದು ತೆರಿಗೆಯನ್ನು ವಿಧಿಸುತ್ತಿದ್ದರು.

ಕಳ್ಳವಳಿಕೆ, ಕುಮಾರ ಗದ್ಯಾಣ, ಪನ್ನಾಯ — ಹೀಗೆ ಹಲವಾರು ರೀತಿಯ ತೆರಿಗೆಗಳ ಉಲ್ಲೇಖಗಳನ್ನು ಎಂ.ಚಿದಾನಂದಮೂರ್ತಿಯವರು ತಮ್ಮ ಶಾಸನಗಳ ಸಾಂಸ್ಕೃತಿಕ ಅಧ್ಯಯನದಲ್ಲಿ ಹೆಸರಿಸುತ್ತಾರೆ.
(ಉದ್ಧೃತ)

ಆದರೆ ಹರಿಶ್ಚಂದ್ರಕಾವ್ಯದಲ್ಲಿ ಇವು ಯಾವ ತೆರಿಗೆಗಳೂ ವಿಧಿಸಿದ್ದು ಕಂಡು ಬರುವುದಿಲ್ಲ. ಅಲ್ಲಿ "ಸುಡುವ ನೆಲದೆರಿಗೆ ಹಾಗ" (ಹ.ಕಾ.ಸ್ಥ.11-36) ಎಂದು ಶ್ಮಶಾನದಲ್ಲಿ ಹೆಣವನ್ನು ಸುಡುವುದಕ್ಕಾಗಿ 'ನೆಲದೆರಿಗೆ'ಯನ್ನು ಕೊಡುವ ಪದ್ಧತಿ ಇದ್ದದ್ದು ರಾಘವಾಂಕನ ಈ ಪದ್ಯದಿಂದ ಸ್ಪಷ್ಟವಾಗುತ್ತದೆ.

"ಸುಡುಗಾಡ ಕಾಹವೆಂದೇನದರ ಪಂಥಮಂ
ನುಡಿದು ಪೇಳನೆ ಸುಡುವ ನೆಲದೆರಿಗೆ ಹಾಗ ಹಣ
ದುಡುಗೆಯಂ ತಂದೆನಗೆ ಕೊಡುವುದು....... (ಹ.ಕಾ.ಸ್ಥ.11-36)

<u>ತೆರಿಗೆಗಳನ್ನು ಸಂಗ್ರಹಿಸುವ ಅಧಿಕಾರಿ ವರ್ಗ</u>:

ಪ್ರಾಚೀನ ಕರ್ನಾಟಕದಲ್ಲಿ ನೂರಾರು ರೀತಿಯ ತೆರಿಗೆಗಳನ್ನು ಕಾಣುತ್ತೇವೆ. ಹಾಗಾಗಿ ತೆರಿಗೆಗಳನ್ನು ಸಂಗ್ರಹಿಸತಕ್ಕ ಅಧಿಕಾರಿಗಳ ವ್ಯವಸ್ಥೆಯು ಸಾಕಷ್ಟು ಜಟಿಲವಾಗಿದ್ದಿರಬೇಕು. ಹರಿಶ್ಚಂದ್ರ ಕಾವ್ಯದಲ್ಲಿ ಉಲ್ಲೇಖವಾದ ತೆರಿಗೆಯು ಒಂದೇ ಒಂದು. ಅದು ನೆಲದೆರಿಗೆ— ಸ್ಮಶಾನದಲ್ಲಿ ಹೆಣವನ್ನು ಸುಡಲಿಕ್ಕಾಗಿ ಕೊಡತಕ್ಕ ತೆರಿಗೆ. ಇದನ್ನು ಸಂಗ್ರಹಿಸುವುದಕ್ಕೆ ನಿಯುಕ್ತನಾದ ಅಧಿಕಾರಿ ವೀರಬಾಹುಕ. ಈತನು ನಿಷ್ಠಾವಂತ ಪ್ರಾಮಾಣಿಕ ಅಧಿಕಾರಿ ಎಂಬುದು ವೀರಬಾಹುಕನು ಹರಿಶ್ಚಂದ್ರನಿಗೆ ಸುಡುಗಾಡು ಕಾಯುವ ಕಟ್ಟು-ಕಟ್ಟಳೆಗಳನ್ನು ಕೇಳಿದಾಗ ಹೇಳತಕ್ಕ ಮಾತುಗಳಲ್ಲಿ ಧ್ವನಿತವಾಗುತ್ತದೆ.

"ಸುಡುಗಾಡ ಕಾಹವೆಂದೇನದರ ಪಂಥಮಂ
ನುಡಿದು ಪೇಳನೆ ಸುಡುವ ನೆಲದೆರಿಗೆ ಹಾಗ ಹಣ
ದುಡುಗೆಯಂ ತಂದೆನಗೆ ಕೊಡುವುದಾ ತಲೆಯಕ್ಕಿಯಂ ನಿನ್ನ ಸಂಬಳಕ್ಕೆ
ಪಡಿಯಾಗಿ ಕೊಂಡುಂಬುದಳುಪದಿರು ಹುಸಿಯದಿರು
ಬಿಡದಿರೆಂದುಡುಗೊರೆಯ ವೀಳೆಯದ ಕೂಡೆ ತಾ
ಪಿಡಿದ ಸಂಬಳಿಗೋಲ ಮುದ್ರೆಗೊಟ್ಟಂ ಏನರ್ಥಮುದ್ರಿತಧರಾಧಿಪತಿಗೆ"
(ಹ.ಕಾ.ಸ್ಥ.. 12-36)

ತಲೆಯಕ್ಕಿಯನ್ನು ನಿನ್ನ ಸಂಬಳಕ್ಕೆ ಪ್ರತಿಯಾಗಿ ತೆಗೆದುಕೋ ಎಂದು ಹರಿಶ್ಚಂದ್ರನಿಗೆ ಹೇಳುವ ನಲ್ಲದೆ, ಅಳುಪದಿರು, ಹುಸಿಯದಿರು, ಬಿಡದಿರೆಂದು ಹರಿಶ್ಚಂದ್ರನನ್ನು ಎಚ್ಚರಿಸುವನು. ಹೀಗೆ ಹರಿಶ್ಚಂದ್ರಕಾವ್ಯದಲ್ಲಿ ತೆರಿಗೆಗಳು, ತೆರಿಗೆಗಳನ್ನು ಸಂಗ್ರಹಿಸುವ ಅಧಿಕಾರಿಯನ್ನು ಕುರಿತು ಕೆಲವು ಅಂಶ ಗಳು ಕಂಡು ಬರುತ್ತವೆ.

## ಆಕರ ಗ್ರಂಥಗಳು:

1) ಸೂರ್ಯನಾರಾಯಣ ಎಲ್.ವಿ. :1988: ರಾಘವಾಂಕ — ಒಂದು ಅಧ್ಯಯನ
ಕನ್ನಡ ಸಾಹಿತ್ಯ ಪರಿಷತ್,
ಬೆಂಗಳೂರು.

2) ವೆಂಕಟರಾಮಪ್ಪ. :1975: ಕವಿ ರಾಘವಾಂಕ. ಡಿ.ವಿ.ಕೆ.ಮೂರ್ತಿ. ಮೈಸೂರು.

# ಧಾರ್ಮಿಕ ವ್ಯವಸ್ಥೆ

ಕನ್ನಡ ಸಾಹಿತ್ಯವನ್ನು ಲೌಕಿಕ –ಆಗಮಿಕಗಳೆಂದು ಗುರುತಿಸುವಷ್ಟು ಹೇರಳವಾದ ಪ್ರಮಾಣದಲ್ಲಿ ಧಾರ್ಮಿಕ ಕಾವ್ಯಗಳು ನಮ್ಮಲ್ಲಿ ಹುಟ್ಟಿಕೊಂಡಿವೆ. ಕವಿಯಾದವನು ತಾನು ಸೇರಿದ ಮತಧರ್ಮವನ್ನು ಕಾವ್ಯ ಮುಖೇನ ಪ್ರಸಾರ ಮಾಡುವ ಸಂಪ್ರದಾಯ ಮೊದಲಿನಿಂದಲೂ ಬೆಳೆದು ಬಂದುದೇ ಇದಕ್ಕೆ ಕಾರಣವೆನ್ನಬಹುದು. ಆದರೆ ಸೂಕ್ಷ್ಮವಾಗಿ ನೋಡಿದಾಗ ರಾಘವಾಂಕನ '' ಹರಿಶ್ಚಂದ್ರ ಕಾವ್ಯ '' ಈ ಉದ್ದೇಶಕ್ಕೆ ಹೊರತಾದ ರಚನೆಯಾಗಿದೆ. ಏಕೆಂದರೆ ತನ್ನ ಸಮಕಾಲೀನ ಪರಿಸರದಲ್ಲಿ ಹುಟ್ಟಿದ ಕಾವ್ಯಗಳಂತೆ ಈತ ಕೇವಲ ವೀರಶೈವ ಸಿದ್ಧಾಂತ ಪ್ರಚಾರಕ್ಕೆ ಮಾತ್ರ ತನ್ನ ಹರಿಶ್ಚಂದ್ರ ಕಾವ್ಯವನ್ನು ಬರೆದಿಲ್ಲ. ಅದಕ್ಕೆ ಬದಲು 'ಸತ್ಯ' ವೆಂಬ ಸರ್ವದರ್ಶನ ಪ್ರಣೀತ ಮೌಲ್ಯವನ್ನು ತನ್ನ ಕೃತಿಯಲ್ಲಿ ಪ್ರತಿಪಾದಿಸಿದ್ದಾನೆ. ಈ ಅರ್ಥದಲ್ಲಿ ರಾಘವಾಂಕನು ವೀರಶೈವ ಧರ್ಮವನ್ನು ವಿಶಾಲಗೊಳಿಸಿದ್ದಾನೆ ಅಥವಾ ಅದರ ಪರಿಧಿಯನ್ನು ದಾಟಿ ಬೆಳೆದನೆಂದರೂ ನಡೆದೀತು.

ವೇದ ಪುರಾಣ ಇತಿಹಾಸಗಳಲ್ಲಿ ಅಲ್ಪ ಪ್ರಮಾಣದಲ್ಲಿ ಕಾಣಿಸಿಕೊಂಡ ಹರಿಶ್ಚಂದ್ರನ ವೃತ್ತಾಂತವನ್ನು ತನ್ನ ಕಾವ್ಯದ ವಸ್ತುವನ್ನಾಗಿ ಮಾಡಿಕೊಂಡು ಸಮಗ್ರವಾದ ಒಂದು ಕಾವ್ಯವನ್ನು ರಚಿಸಿದನು. ರಾಘವಾಂಕನ ಹರಿಶ್ಚಂದ್ರನು ಶಿವನಿಂದ ಅನುಗ್ರಹಿತನಾಗಿ ಮರ್ತ್ಯಕ್ಕೆ ಇಳಿದು ಬಂದವನಲ್ಲ. ಶಿವಭಕ್ತಿಯ ಪ್ರಸಾರಕ್ಕಾಗಿಯಾಗಲಿ, ಶಿವಧರ್ಮದ ಉದ್ಧಾರಕ್ಕಾಗಿಯಾಗಲಿ, ಪರಧರ್ಮದ ದಮನಕ್ಕಾಗಿಯಾಗಲಿ ಉದ್ಯುಕ್ತನಾದವನಲ್ಲ. ಅವನು ಮನುಷ್ಯನಾಗಿ ಇದ್ದುಕೊಂಡೆ ಸತ್ಯನಿಷ್ಠೆಯಿಂದ ಶಿವನನ್ನು ಮೆಚ್ಚಿಸಿದವನು. ರಾಘವಾಂಕನ ಕಾವ್ಯಗಳನ್ನು ತೌಲನಿಕವಾಗಿ ನೋಡಿದಾಗ [illegible], [illegible]

ಚರಿತೆ, ಆದಯ್ಯನ ಚರಿತ್ರೆ—ಇವುಗಳಲ್ಲಿ ಧಾರ್ಮಿಕ ಅಂಶಗಳೇ ಹೆಚ್ಚಾಗಿ ಪ್ರತಿಪಾದಿಸಲ್ಪಟ್ಟಿವೆ. ಆದರೆ ಹರಿಶ್ಚಂದ್ರಕಾವ್ಯದಲ್ಲಿ 'ಮತೀಯ ಅಂಶಗಳು ವಿರಳವಾಗಿಯೂ ಕಾವ್ಯಾಂಶಗಳು ಸಿದಡವಾಗಿಯೂ ಇವೆ" ಎಂಬ ಟಿ.ಎಸ್.ವೆಂಕಣ್ಣಯ್ಯನವರ ಮಾತು ಸತ್ಯವೆನಿಸುತ್ತದೆ. "ಹರಿಶ್ಚಂದ್ರ ಕಾವ್ಯವನ್ನು ಬರೆಯುವಲ್ಲಿ ಮಾತ್ರ ರಾಘವಾಂಕನಿಗೆ ತಾನು ಈ ಕೃತಿಯ ಮೂಲಕ ಮತಧರ್ಮ ಪ್ರಸಾರದ ಉದ್ದೇಶ ಪ್ರಧಾನವಾಗಿರದೆ ತನ್ನ ಮತಧರ್ಮದ ಮಿತಿಗೆ ಮೀರಿದಬೇಕೆಂದು ವಿಶ್ವಸಾಮಾನ್ಯವಾದ ವಸ್ತುವನ್ನು ಪ್ರತಿಪಾದಿಸುವ ಉದ್ದೇಶವೇ ಪ್ರಧಾನವಾಗಿತ್ತು..."

(ಶಿವರುದ್ರಪ್ಪ :1976:73)

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಕಾವ್ಯವನ್ನು ರಚಿಸಬಾರದು, ಅದು 'ಶಿವನ ತದೀಯ ಪ್ರೈಜಂ' ರನ್ನು ಸ್ತುತಿಸಿ ಕಾವ್ಯರಚಿಸಬೇಕೆಂಬ ಹರಿಹರನ ಸಂಪ್ರದಾಯವನ್ನು ತಿರಸ್ಕರಿಸಿ ನೂತನ ಮಾರ್ಗವನ್ನು ಸೃಷ್ಟಿಸಿದ್ದಾನೆ. ಕಾವ್ಯದ ವಸ್ತು, ವಸ್ತುವಿನ ನಿರೂಪಣೆ, ಉದ್ದೇಶ, ರೀತಿ, ಭಾಷೆ, ಛಂದಸ್ಸು...... ಈ ಎಲ್ಲಾ ದೃಷ್ಟಿಯಿಂದಲೂ ರಾಘವಾಂಕ ತನ್ನದೇ ಆದ ಹೊಸ ಮಾರ್ಗವನ್ನು ಹಿಡಿದಿದ್ದಾನೆ.

ರಾಘವಾಂಕನ . ಹರಿಶ್ಚಂದ್ರ ಕಾವ್ಯದ ಉದ್ದೇಶವನ್ನು ಕೆಳಗಿನ ಪದ್ಯದಲ್ಲಿ ಕಾಣಬಹುದು.

"ಚಿತ್ತದೊಳು ವಿಮಲರಸಭಾವ ಭರಿತಾರ್ಥ ಸಂ
ಪತ್ತು ಸಜ್ಜನರ ಪುಳಕಾಂಕುರಂಗಳನು ಹೊ
ತ್ತಿತ್ತಿಯಾನಂದಾಶ್ರುಬಿಂದು ವ್ರಜಂಗಳಿಂ ಸಲಹಿ ಮಡಲಿರಿದು ಬೆಳೆದು
ಮತ್ತೊಂದರಭಿಲಾಷೆಯಂ ಮರೆದು ಕಳೆದು ತ
ತಮ್ಮೃತ್ತಲೆರಗಿಸುವ ಶಿವಭಕ್ತಿವಲ್ಲರಿಯ ಹೊಸ
ಬಿತ್ತೆಂದೆನಿಸುವ ಹರಿಶ್ಚಂದ್ರನೃಪ ಕಥಾ ವೃತ್ತಾಂತವೆಂತೆಂದೊಡೆ"

(ಹ.ಕಾ.ಸ್ಥ.1—19)

ರಾಘವಾಂಕನು ಈ ಪದ್ಯದಲ್ಲಿ ಒಂದು ಧಾರ್ಮಿಕ ಕಾವ್ಯ ಹೇಗಿರಬೇಕೆಂಬುದನ್ನು ತಿಳಿಸುತ್ತಾ, "ಚಿತ್ತದಲಿ ವಿಮಲರಸ ಭಾವವನು ತುಂಬಿ ಸದಾ ಮನದಲಿ ನಿತ್ಯಾನಂದವನ್ನು ಹೊಂದಿ ಲೌಕಿಕದ ಆಸೆ-ಅಭೀಷ್ಟಗಳಿಗೆ ಮನಸೆಳೆಯದೆ ಅವೆಲ್ಲವುಗಳನ್ನು ಕಳೆದು ಆ ಸ್ಥಳದಲ್ಲಿ ಶಿವಭಕ್ತಿಯನ್ನುಂಟು ಮಾಡಬೇಕು. ಹಾಗೆ ಮಾಡತಕ್ಕ ಶಕ್ತಿ ತನ್ನ ಕಾವ್ಯಕ್ಕಿದೆ ಎಂದು ತಿಳಿಸುವನು.

ಧಾರ್ಮಿಕತೆ ಎಂದರೆ ಕವಿಯಾದವನು ಕೇವಲ ತನ್ನ ಹಾಗು ತನ್ನ ಸಮಕಾಲೀನ ಧರ್ಮದ ಬಗ್ಗೆ ತಿಳಿಸಿದರೆ ಸಾಲದು. ಅದರಲ್ಲಿಯೂ ಹೊಸತನವನ್ನು ಸೃಷ್ಟಿಸಿ ತೋರಿಸಬೇಕೆಂಬುದೇ ರಾಘವಾಂಕನ ಆಶಯವಾಗಿದ್ದಿತೆನ್ನುವುದು "ಶಿವಭಕ್ತಿವಲ್ಲರಿಯ ಹೊಸ ಬಿತ್ತೆಂದೆನಿಸುವ ಹರಿಶ್ಚಂದ್ರನೃಪ ಕಥಾ ವೃತ್ತಾಂತ" ಎಂಬಲ್ಲಿ ಧ್ವನಿತವಾಗುತ್ತದೆ.

ಬರೀ ವೀರಶೈವ ತತ್ವಗಳನ್ನು ಮಾತ್ರ ಬೋಧಿಸಿದರೆ ಸಾಲದು. ಅದರ ಬದಲಾಗಿ ಇರುವ ಮನುಷ್ಯ ಧರ್ಮವನ್ನು ಅದರಲ್ಲೂ ಸಮಾಜದ ಆಚರಣಾ ಮಾರ್ಗದ ಮೇಲೆ ಸತ್ಪ್ರೇರಣೆ ಬೀರಬಲ್ಲ 'ಸತ್ಯ' ವೆಂಬ ದೊಡ್ಡ ಮೌಲ್ಯವನ್ನು ಹರಿಶ್ಚಂದ್ರ ಪಾತ್ರದ ಮೂಲಕ ಪ್ರತಿಪಾದಿಸಿರುವುದು ರಾಘವಾಂಕನ ವೈಶಿಷ್ಟ್ಯ. ಬರೀ ತತ್ವವನ್ನು ಬೋಧಿಸುವುದು ದೊಡ್ಡದಲ್ಲ. ಅದನ್ನು ಪಾಲಿಸುವುದು ದೊಡ್ಡದೆಂಬ ನೀತಿಯನ್ನು ರಾಘವಾಂಕ ತನ್ನ ಕಾವ್ಯದ ಮೂಲಕ ಸಾರಿದ್ದಾನೆ.

ರಾಘವಾಂಕನು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಸಿದ್ಧರಾಮ ಚಾರಿತ್ರ, ವೀರೇಶ ಚರಿತೆ, ಸೋಮನಾಥ ಚರಿತ್ರೆಯಲ್ಲಿ ಹೇಳಿದಂತೆ ವೀರಶೈವ ಧರ್ಮದ ತತ್ವಗಳನ್ನು ಪ್ರತಿಪಾದಿಸಬಹುದಾಗಿತ್ತು. ಆದರೆ ಹಾಗೆ ಮಾಡದೇ ಸಾರ್ವತ್ರಿಕವಾದ, ಸಾರ್ವದೇಶಿಕವಾದ ಸಾರ್ವಕಾಲೀನವಾದ 'ಸತ್ಯ' ವೆಂಬ ಮೌಲ್ಯವನ್ನು ತನ್ನ ಕಾವ್ಯದಲ್ಲಿ ಪ್ರತಿಪಾದಿಸಿದ್ದಾನೆ. ಆದ್ದರಿಂದಲೇ ತನ್ನ ಕಾವ್ಯದ ಉದ್ದೇಶವನ್ನು ಹೇಳುವಲ್ಲಿ ''ಶಿವಭಕ್ತಿವಲ್ಲರಿಯ ಹೊಸ ಬಿತ್ತೆಯೆಂದೆನಿಸುವ ಹರಿಶ್ಚಂದ್ರ ನೃಪ ಕಥಾವೃತ್ತಾಂತ'' ವೆಂದು ಹೇಳಿದ್ದಾನೆ. ಧಾರ್ಮಿಕ ಕಾವ್ಯ ನಿರ್ಮಾಣ ಪರಂಪರೆಯಲ್ಲಿಯೇ ತನ್ನ ಈ ಹರಿಶ್ಚಂದ್ರ ಕಾವ್ಯವು ನೂತನ ಸಂಪ್ರದಾಯವನ್ನು ಸೃಷ್ಟಿಸಲಿಕ್ಕೆ ಬಿತ್ತಿದಂತಹ ಬೀಜವೆಂಬುದು ರಾಘವಾಂಕನ ಅಭಿಪ್ರಾಯ. ಆದ್ದರಿಂದ ಹರಿಶ್ಚಂದ್ರ ಕಾವ್ಯದಲ್ಲಿ ಪ್ರತಿಪಾದಿತವಾದ ಧಾರ್ಮಿಕ ಅಂಶಗಳನ್ನು ಈ ಹಿನ್ನಲೆಯಲ್ಲಿ ನೋಡುವುದು ಯೋಗ್ಯ.

ವೈದಿಕ ಗ್ರಂಥಗಳಾದ ಐತ್ತರೇಯ ಬ್ರಾಹ್ಮಣ, ಸಾಂಖ್ಯಾಯನ ಸೂತ್ರಗಳಲ್ಲಿ ಹಾಗೂ ಪುರಾಣಗಳಲ್ಲಿಯಾಗಲಿ ಹರಿಶ್ಚಂದ್ರನನ್ನು ಸತ್ಯವಂತನೆಂದು ಚಿತ್ರಿಸಿಲ್ಲ. ಬದಲಾಗಿ ವರುಣನಿಗೆ ಕೊಟ್ಟ ಮಾತಿಗೆ ತಪ್ಪಿದನೆಂದು ಚಿತ್ರಿಸಲ್ಪಟ್ಟಿದೆ. ಆದರೆ ವಚನಕಾರರ 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ' ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು', 'ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮನೆಂತೊಲಿವನಯ್ಯಾ'' -ಎಂಬ ವಚನಗಳಿಂದ ಪ್ರೇರಿತನಾದ ರಾಘವಾಂಕನು ಈ ಸತ್ಯನಿಷ್ಠೆಯನ್ನು ಹಾಗು ತಾವು ನಂಬಿದ ಧ್ಯೇಯಗಳನ್ನು ಎಂತಹ ಸಂದರ್ಭಗಳಲ್ಲಿಯೂ ಬಿಟ್ಟುಕೊಡದೆ ಕೃತಿರೂಪಕ್ಕಿಳಿಸಬೇಕೆಂಬ ಸಂಕಲ್ಪ 'ಅಂಜದರಾಗದು, ಅಳುಕಿದರಾಗದು' -ಎಂಬ ಧ್ಯೇಯವಾಕ್ಯಗಳನ್ನು ರಾಘವಾಂಕನು ಹರಿಶ್ಚಂದ್ರ ಪಾತ್ರದಲ್ಲಿ ಕಂಡರಿಸಿದಂತಿದೆ. ಕ್ಷೇಮೇಂದ್ರನ ಚಂಡಕೌಶಿಕ ನಾಟಕ, ಮಾರ್ಕಂಡೇಯ ಪುರಾಣ ಮತ್ತು ದೇವಿ ಭಾಗವತ -ಇವುಗಳನ್ನು ಮುಖ್ಯ ಆಕರಗಳನ್ನಾಗಿಟ್ಟುಕೊಂಡು ವಚನಕಾರರ ಮೌಲ್ಯಗಳಿಂದ ಪ್ರೇರಿತನಾದ ರಾಘವಾಂಕನು ಹರಿಶ್ಚಂದ್ರನನ್ನು ಸತ್ಯವಂತನನ್ನಾಗಿ ಚಿತ್ರಿಸಿದ್ದಾನೆ. ಹರಿಶ್ಚಂದ್ರನಂತಹ ಸತ್ಯವಂತರು ಮೂರು ಲೋಕದಲ್ಲಿ ಇಲ್ಲವೇ ಇಲ್ಲವೆಂದು ವಶಿಷ್ಠನ ಮೂಲಕ ಹೇಳಿಸಿದರೂ ಕೂಡ ಹರಿಶ್ಚಂದ್ರನು ವರುಣನಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲಾಗದ ವಿಷಯವನ್ನು ಪ್ರಾಸಂಗಿಕವಾಗಿ ಪ್ರಸ್ತಾಪಿಸಿ ಸಮಯೋಚಿತ ಪ್ರಜ್ಞೆ ತೋರಿದ್ದಾನೆ. ಏಕೆಂದರೆ 'ಯಾರ ಮೌಲ್ಯ

ನಿಷ್ಠೆಯು ಬುದ್ಧಿಪೂರ್ವಕವಾಗಿ ಆರಂಭವಾಗುವುದಿಲ್ಲ. ಯಾವುದೋ ಒಂದು ಸಂದರ್ಭದಲ್ಲಿ ನಿಜವಾದ ವ್ಯಕ್ತಿಗೆ ತಾನು ಯಾವುದೋ ಒಂದು ಮೌಲ್ಯಕ್ಕೆ ಬದ್ಧನಾಗಿ ಬದುಕಬೇಕೆಂಬ ಸಂಕಲ್ಪ ಮೂಡಿತು, ಬಳಿಕ ಆನಂತರ ಅದನ್ನು ಆತ ಜೀವಂತವಾಗಿಸಿ ಬದುಕುವುದರ ಮೂಲಕ ಅವನ ವ್ಯಕ್ತಿತ್ವ ಆ ಒಂದು ಮೌಲ್ಯದೊಂದಿಗೆ ಬೆಸೆದುಕೊಳ್ಳುತ್ತದೆ. ಹರಿಶ್ಚಂದ್ರನ ಪಾಲಿಗೆ 'ಸತ್ಯ' ಎನ್ನುವುದು ಅವನಿಗೆ ಪ್ರಧಾನ ಮೌಲ್ಯವೆಂದು, ತಾನು ಅದಕ್ಕಾಗಿಯೇ ಬದುಕಬೇಕೆಂದು ಎಂದೋ ಅನ್ನಿಸಿರಬೇಕು. ಆದ್ದರಿಂದಾಗಿ ಅವನ ಸತ್ಯನಿಷ್ಠೆ ಯಾವ ಸಂದರ್ಭದಲ್ಲಿ ಎಂಥ ಕಷ್ಟಕ್ಕೂ ಜಗ್ಗದೆ ಅಚಲವಾಗಿ ನಿಲ್ಲುತ್ತದೆ.

(ಶಿವರುದ್ರಪ್ಪ. 1982:128)

ಹರಿಶ್ಚಂದ್ರನ ದೃಷ್ಟಿಯಲ್ಲಿ ಸತ್ಯವೆಂದರೆ ಸುಳ್ಳನ್ನಾಡದಿರುವುದಷ್ಟೇ ಅಲ್ಲ, ಕೊಟ್ಟ ಮಾತಿಗೆ ತಪ್ಪದೇ ನಡೆಯುವುದು. ಎಂಥ ಕಷ್ಟ ಬಂದರೂ, ಪ್ರಾಣಹೋದರೂ ನುಡಿದಂತೆ ನಡೆಯುವುದು, ವಿಶ್ವಾಮಿತ್ರನ ಮಾತಿನ ಬಲೆಗೆ ಸಿಕ್ಕಿ ತನ್ನ ಸಮಸ್ತ ರಾಜ್ಯವನ್ನು, ಧನಕನಕ ಕೋಶವನ್ನು ಕಳೆದುಕೊಳ್ಳುತ್ತಾನೆ. ವಾಕ್ಯಪರಿಪಾಲನೆಗಾಗಿ ಸತಿ-ಸುತರನ್ನು ಮಾರುತ್ತಾನೆ. ಆಗ ಹರಿಶ್ಚಂದ್ರನು ವ್ಯಾಮೋಹದ ಬಂಧನಕ್ಕೆ ಸಿಲುಕದಂತೆ ಕಂಡರೂ ಕೂಡ ಚಂದ್ರಮತಿಯ ಮಾತಿನಿಂದ ವ್ಯಾಮೋಹ ಬಂಧನ ಕಳಚುವಲ್ಲಿ ಸಫಲನಾಗುತ್ತಾನೆ. ರಾಜ್ಯ ವ್ಯಾಮೋಹ ಹಾಗು ಸತಿಸುತರ ಮೇಲಿನ ಮೋಹವನ್ನು ಕಳಚಬಹುದು. ಆದರೆ ಕುಲಮದ ಅಳಿಯುವುದು ಬಹುಕಷ್ಟ. ಬಸವಣ್ಣನಂಥ ಸಾಧಕನಿಗೇ ಅದು ಕಠಕಷ್ಟವಾಯಿತು. ಅಂಥ ಅನಿವಾರ್ಯ ಸಂದರ್ಭವನ್ನು ಹರಿಶ್ಚಂದ್ರನು ಎದುರಿಸುತ್ತಾನೆ. ತನ್ನ ಸಮಸ್ತ ರಾಜ್ಯವನ್ನು ಸತಿಸುತರನ್ನು ಕಳೆದುಕೊಂಡರೂ ಕೂಡಾ ''ತಾನು ರವಿಕುಲದವನು'' ಎಂಬ ಹೆಮ್ಮೆಯನ್ನು ಬಿಟ್ಟಿಲ್ಲ. ಆದ್ದರಿಂದಲೇ ಕಡೆಗೆ ತನ್ನನ್ನು ಮಾರಿಕೊಳ್ಳುವಾಗ ವೀರಬಾಹುಕನು ತನ್ನ ಹಡಪಿಗನಿಂದ ಬೆಲೆಯನ್ನು ಕೇಳಿದಾಗ ''ಸೂರ್ಯವಂಶದಲ್ಲಿ ಹುಟ್ಟಿ ಮೃಡಮೂರ್ತಿನ ವಶಿಷ್ಠಗೆ ಶಿಷ್ಯನಾಗಿ....... ನೋಡು'' ''ಕಡೆಗೆ ಮೆಣಸು ಹುಳಿತಡೆ ಜೋಳದಿಂ ಕುಂದೇ'' ಎಂದು ಹರಿಶ್ಚಂದ್ರನು ಕೋಪಿಸಿಕೊಳ್ಳಲು ಕುಲದ ಹೆಮ್ಮೆಯೇ ಕಾರಣ. ಕೊನೆಗೆ ಕೋಪವಿಳಿದು ತಾನು ಆಡಿದುದು ತಪ್ಪೆಂದು ತಿಳಿದಾಗ ''ರವಿಕುಲಕೆ ಕುಂದಿಂದು ಬಂದಿತಂ ಬರಲಿ'' ಎಂದು ಆ ಕುಲಾಭಿಮಾನವನ್ನು ಕತ್ತೊಗೆಯುವನು.

ಹರಿಶ್ಚಂದ್ರನ ಸತ್ಯದ ಪರೀಕ್ಷೆ ಇಲ್ಲಿಗೆ ಮುಗಿಯುವುದಿಲ್ಲ. ಆತ ಇನ್ನೊಂದು ಕಠಿಣವಾದ ಪರೀಕ್ಷೆಗೆ ಗುರಿಯಾಗಬೇಕಾಗುತ್ತದೆ. ಅದು ಶ್ಮಶಾನದ ಪ್ರಸಂಗ. ''ಸತ್ಯಸಾಧಕರಿಗೆ ಈ ಜಗತ್ತು ಮಿಥ್ಯೆ ಎಂಬ ಅರಿವಿದ್ದರೆ ಸಾಲದು. ಅನುಭವವೂ ಅಗತ್ಯ. ಸ್ಮಶಾನವೆಂಬ ಎಲ್ಲ ಲೌಕಿಕ ವಿಭವಗಳ ನಿಲುಗಡೆ ಜೀವನ ನಶ್ವರ ಮಿಥ್ಯೆ ಎಂಬ ಅರಿವು ಅನುಭವಕ್ಕೆ ಬರುವುದಕ್ಕೆ ಶ್ಮಶಾನಕ್ಕಿಂತ ಮಿಗಿಲಾದ ಸ್ಥಳವಿಲ್ಲ.'' (ಶಿವರುದ್ರಪ್ಪ. 1967-80) ಇಂಥ ಸ್ಮಶಾನದಲ್ಲಿ ದಿನನಿತ್ಯ ಹಲವಾರು ಹೆಣಗಳನ್ನು ನೋಡುತ್ತಾನೆ. ಈ ಹೆಣಗಳು ಯಾರವೋ ಏನೋ ಆದರೆ ಒಂದು ದಿನ ಅನಿರೀಕ್ಷಿತವಾಗಿ ತನ್ನ ಮಗನ ಹೆಣ

ಶ್ಮಶಾನದಲ್ಲಿ ಸುಡಲು ಬರುತ್ತಾರೆ. ಆಗ ಆತ ತೋರಿಸಿದ ಸತ್ಯನಿಷ್ಠೆಯು ಆತನನ್ನು ಅಮರರ ಸಾಲಿಗೆ ಸೇರಿಸುತ್ತದೆ.

ಈ ಘಟನೆ ನಡೆದ ಸ್ವಲ್ಪ ಹೊತ್ತಿನಲ್ಲಿಯೆ ಮತ್ತೊಂದು ಘಟನೆಯನ್ನು ಎದುರಿಸಬೇಕಾಗುತ್ತದೆ. ಚಂದ್ರಮತಿಯು ನೆಲದೆರಿಗೆಯನ್ನು ತರಲು ಹೋಗಿ ಕೊಲೆಯ ಅಪವಾದನೆಯನ್ನು ಹೊತ್ತು ಶಿರಚ್ಛೇದನಕ್ಕಾಗಿ ಹರಿಶ್ಚಂದ್ರನಲ್ಲಿಗೆ ಎಳೆದು ತರಲ್ಪಡುತ್ತಾಳೆ. ಅವಳು ಚಂದ್ರಮತಿ ಎಂದು ತಿಳಿದೂ ಕೊಲ್ಲಲು ಉದ್ಯುಕ್ತನಾದಾಗ ವಿಶ್ವಾಮಿತ್ರ ಮುನಿಯು ಆತನ ಸತ್ಯನಿಷ್ಠೆಯನ್ನು ಪರೀಕ್ಷಿಸುವುದಕ್ಕಾಗಿ ಪ್ರಲೋಭನೆ ಒಡ್ಡುತ್ತಾನೆ. ಆದರೆ ಹರಿಶ್ಚಂದ್ರನು ತನ್ನ ಸತ್ಯನಿಷ್ಠೆಯಿಂದ ಸ್ವಲ್ಪವೂ ವಿಚಲಿತನಾಗದೆ ತನ್ನ ದೃಢ ನಿರ್ಧಾರವನ್ನು ತಿಳಿಸುವನು.

'' ವರಪುತ್ರನಸುವಳಿದು ಪೋದಡೇಂ ನಾನೆನ್ನ
ತರುಣಿಯಂ ಕೊಂದೊಡಂ ಕುಂದೆ ಸತ್ಯವನು ಬಿ
ಟ್ಟರನೆನಿಸಿದಡೆ ಸಾಕು ಎಂದೆತ್ತಿ ಹಿಡಿದ ಖಡ್ಗವ ಜಡಿಯುತ್ತಂತೆಂದನು ''
(ಹ.ಕಾ.ಸ್ಥ.13-17)

ಹರಿಶ್ಚಂದ್ರನು ಪ್ರಲೋಭನೆಯನ್ನೊಡ್ಡಿದ ಮುನಿಗೆ '' ನಿಮ್ಮ ಹಿರಿತನಕೀ ಮಾತು ಯೋಗ್ಯವೇ '' ಎಂದು ಹೇಳಿ ತನ್ನ ಮಗನು ಸತ್ತರೇನು? ತಾನು ತನ್ನ ಪತ್ನಿಯನ್ನು ಕೊಂದರೇನು? ಸತ್ಯಪರಿಪಾಲನೆಯಿಂದ ವಿಮುಖನಾಗಿಲ್ಲವೆನಿಸಿದರೆ ಸಾಕು ಎಂದು ಧೀರೋದಾತ್ತ ನಿಲುವನ್ನು ತಾಳುವನು.

ಹೀಗೆ ಹರಿಶ್ಚಂದ್ರನಿಗೆ ಸತ್ಯವೇ ಧರ್ಮವಾಗಿತ್ತು. ಸತ್ಯವಾಕ್ಯ ಪರಿಪಾಲನೆಯೇ ಆತನ ಜೀವನದ ಗುರಿಯಾಗಿತ್ತು. ಅದಕ್ಕಾಗಿ ಆತ ಎಂತಹ ತ್ಯಾಗಕ್ಕೂ ಕೂಡ ಸಿದ್ಧನಾಗಿದ್ದನು. '' ಸತ್ಯವೆಂಬುದೇ ಹರ, ಹರನೆಂಬುದೇ ಸತ್ಯ '' ವೆಂದು ತಿಳಿದು ಅದನ್ನು ಜೀವನದಲ್ಲಿ ಅಳವಡಿಸಿಕೊಂಡ [illegible] ಹರಿಶ್ಚಂದ್ರ.'' ಹರಿಶ್ಚಂದ್ರನ ಜೀವನವೇ ಸತ್ಯದ ಪ್ರಯೋಗಶಾಲೆ. ಅವನ ಸತ್ಯಸಾಧನೆ ಬುದ್ಧಿಪೂರ್ವಕವಾಗಿ ಮಾಡಲಾದುದಲ್ಲ. ಶ್ರದ್ಧಾಪೂರ್ವಕವಾಗಿ ಮಾಡಲಾದುದು. ಅವನದು ವಿರಾಗಿಗಳ ಹಾಗೆ ಗೂಢ ಗುಹಾವಾಸದಲ್ಲಿ ಸಾಗಿದ ಸಾಧನೆಯಲ್ಲ. ಬಂದ ಬಿರುಗಾಳಿಯಲ್ಲಿ ಗರಿಗೆದರಿ ಹಾರಿದ ಹಕ್ಕಿಯ ಹೋರಾಟದ ಪಂಥದ್ದು. ಅವನು ಕಷಾಯ ವಸ್ತ್ರಧಾರಿಯಾದ ಸನ್ಯಾಸಿಯಲ್ಲ. ಸಂಸಾರದ ಭಾರವನ್ನು ಹೊತ್ತ ವೀರ ಕ್ಷತ್ರಿಯ ರಾಜನಾಗಿ ಧುರದಲ್ಲಿ ಅರಿನೃಪರನ್ನು ನಡುಗಿಸಿದ ಆ ಕ್ಷಾತ್ರವೀರ ಅವನ ಸಾಧನೆಯಲ್ಲಿ ಧರ್ಮವೀರವಾಗಿ ಪರಿಣಮಿಸುತ್ತದೆ.''

(ಶಿವರುದ್ರಪ್ಪ 1967-71)

ರಾಘವಾಂಕನು ಹರಿಶ್ಚಂದ್ರನ ಸತ್ಯನಿಷ್ಠೆಯನ್ನು ಪ್ರಧಾನವಾಗಿಟ್ಟುಕೊಂಡು ಹರಿಶ್ಚಂದ್ರ ಕಾವ್ಯವನ್ನು ರಚಿಸಿದರೂ ಕೂಡ ಕಾವ್ಯದಲ್ಲಿ ವೀರಶೈವ ಧರ್ಮದ ಅಂಶಗಳನ್ನು ವಿರಳವಾಗಿ, ಸಾಂದರ್ಭಿಕವಾಗಿ ಪ್ರಸ್ತಾಪಿಸಿದ್ದಾನೆ. ಆ ವಿರಳ ಅಂಶಗಳನ್ನು ಈ ಕೆಳಗಿನಂತೆ ವಿಂಗಡಿಸಲಾಗಿದೆ.

1) ವಿರುಪಾಕ್ಷನ ಸ್ತುತಿ
2) ಶಿವಲೀಲೆಗಳು
3) ಲಿಂಗಪೂಜಾ ವಿಧಾನ
4) ಪ್ರಸಾದ ತತ್ವ ಮತ್ತು ಮಾಹೇಶ್ವರ ನಿಷ್ಠೆ

1) ವಿರೂಪಾಕ್ಷ ಸ್ತುತಿ:

ವೀರಶೈವ ಕವಿಯಾದ ರಾಘವಾಂಕನು ಹರಿಶ್ಚಂದ್ರ ಕಾವ್ಯದ ಪ್ರಾರಂಭದಲ್ಲಿ ತನಗೆ ಹಾಗು ವೀರಶೈವರಿಗೆ ಶ್ರೇಷ್ಠ ದೈವವಾದ ಹಂಪೆಯ ವಿರುಪಾಕ್ಷನನ್ನು ಮನದುಂಬಿ ಸ್ತುತಿಸಿದ್ದಾನೆ.

"ಶ್ರೀಪತಿಗೆ ಸೊಬಗನುಡುಪತಿಗೆ ಶಾಂತಿಯನು ವಾ
ಣೀಪತಿಗೆ ಚಾತುರ್ಯವ ದಿವಸ್ಪತಿಗೆ ಪ್ರ
ತಾಪಮಂ ಸುರಪತಿಗೆ ಭೋಗಮಂ ರತಿಪತಿಗೆ ಮೂಲೋಕವಾವರಿಸುವ
ರೂಪಂ ಸರಿತ್ಪತಿಗೆ ಗಂಭೀರತೆಯನು ಸ್ವಾ
ಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ ಪಂ
ಪಾಪತಿ ವಿರುಪಾಕ್ಷನೆಮಗಿಷ್ಟಸಿದ್ಧಿಯಂ ಮಾಳ್ಕೆ ಸಂತೋಷದಿಂದ"
(ಹ.ಕಾ.ಸ್ಥ.1-1)

ಈ ಪದ್ಯದಲ್ಲಿ ಕಾಣಿಸಿದ ದೇವರೆಲ್ಲರೂ ವಿಷ್ಣು ಸೊಬಗಿಗೆ ಚಂದ್ರನು, ಶಾಂತಿಗೆ ಬ್ರಹ್ಮನು, ಚತುರತೆಗೆ, ಸೂರ್ಯನು ಪ್ರತಾಪಕ್ಕೆ, ಇಂದ್ರನು ಭೋಗಕ್ಕೆ, ಮನ್ಮಥನು ಸೌಂದರ್ಯಕ್ಕೆ, ಆದಿಶೇಷನು ಗಂಭೀರತೆಗೆ, ಅಗ್ನಿಯು ತೇಜಸ್ಸಿಗೆ ಒಡೆಯರು ಎಂಬುದು ಸಾಮಾನ್ಯವಾಗಿ ಎಲ್ಲರ ತಿಳುವಳಿಕೆ. ಆದರೆ ರಾಘವಾಂಕನು ತನ್ನ ದೈವವಾದ ವಿರುಪಾಕ್ಷನು ಅವರೆಲ್ಲರಿಗಿಂತ ಶ್ರೇಷ್ಠನೆಂದು ತಿಳಿಸುವುದಕ್ಕಾಗಿ. ಆ ದೇವತೆಗಳ ಸೊಬಗು, ಶಾಂತಿ, ಚತುರತೆ, ಪ್ರತಾಪ, ಭೋಗ, ಸೌಂದರ್ಯ, ಗಂಭೀರತೆ ಹಾಗು ತೇಜಸ್ಸು ಮೊದಲಾದವುಗಳನ್ನು ವಿರುಪಾಕ್ಷನು ಆ ದೇವರಿಗೆ ಕೊಟ್ಟನೆಂದು ಹೇಳುವನು. ಸೌರವ್ಯೂಹದಲ್ಲಿ ಹೇಗೆ ಸೂರ್ಯನ ಸುತ್ತ ಎಲ್ಲ ಗ್ರಹಗಳು ಸುತ್ತುತ್ತವೆಯೋ, ಹೇಗೆ ನಕ್ಷತ್ರಗಳ ಬೆಳಕನ್ನು ಗ್ರಹಗಳು ಸ್ವೀಕರಿಸಿ ಅದು ತಮ್ಮದೆನ್ನುವಂತೆ ಪ್ರತಿಫಲನವಿತ್ತವೆಯೋ ಹಾಗೆ ಎಲ್ಲ ಗುಣಗಳ ಅಧಿದೈವವಾದ ವಿರುಪಾಕ್ಷನು ಆ ದೇವರುಗಳಿಗೆ ತನ್ನಲ್ಲಿಯ ಗುಣಗಳನ್ನು ಒಂದೊಂದಾಗಿ ಕೊಟ್ಟಿದ್ದಾನೆ — ಎಂದು ಹೇಳುವುದರ ಮೂಲಕ ವಿರುಪಾಕ್ಷನನ್ನು ಉಳಿದ ದೇವತೆಗಳಿಗಿಂತ ಶ್ರೇಷ್ಠನನ್ನಾಗಿಸಿರುವನು. ಇದು ರಾಘವಾಂಕರು ಬದುಕಿದ ಕಾಲದಲ್ಲಿ ಧರ್ಮದ ಪೈಪೋಟಿ ಸಾಕಷ್ಟಿತ್ತೆನ್ನುವುದಕ್ಕೆ ಆ ಕಾಲದಲ್ಲಿ ರಚಿತವಾದ ಕೃತಿಗಳೇ ಸಾಕ್ಷಿ.

ಕೆಲವು ಜನ ಕವಿಗಳು ತಮ್ಮ ಕಾವ್ಯದಲ್ಲಿ ತಮ್ಮ ಧರ್ಮವನ್ನು ಎತ್ತಿ ಹಿಡಿದು ಅನ್ಯಧರ್ಮವನ್ನು ತೆಗಳುವುದನ್ನು ಕನ್ನಡ ಸಾಹಿತ್ಯ ಚರಿತ್ರೆಯ ಅಧ್ಯಯನವು ಸ್ಪಷ್ಟಪಡಿಸುತ್ತದೆ. ಈ ವಿಷಯದಲ್ಲಿ ರಾಘವಾಂಕನು ಹರಿಶ್ಚಂದ್ರ ಕಾವ್ಯದಲ್ಲಿ ಅನ್ಯ ದೈವಗಳನ್ನು ತೆಗಳದೆ ಸತ್ಯವೆಂಬ ತನ್ನ ದೈವವನ್ನು ಎತ್ತಿ ಹಿಡಿಯುವ ನೈಪುಣ್ಯವನ್ನು ತೋರಿಸಿದ್ದಾನೆ.

ರಾಘವಾಂಕನು ತನ್ನ ಕಾವ್ಯಕ್ಕೆ ಸಾಕ್ಷಿಯಾಗಿ ನರಮಾನವನನ್ನು ಹೆಸರಿಸದೆ "ಶ್ರೀಗುರು ವಿರುಪಾಕ್ಷನ ಪಾದವೇ ದಿವ್ಯ" ಎಂದು ಹೇಳುವನು.

"ವೇದ ನಾಲ್ಕರೊಳು ಹದಿನಾರು ಶಾಸ್ತ್ರಂಗಳೊಳು
ವಾದಿಸುವ ಹದಿನೆಂಟು ಪುರಾಣದೊಳು ಕೇಳ್ದು
ಶೋಧಿಸದೆ ತಿಳಿದು ತೂಗಿದೆನೊರೆದೆ ನಾನಯ್ಯ ಶ್ರೀಗುರುವಿರುಪಾಕ್ಷನ
ಪಾದವೇ ದಿವ್ಯವಿದರೊಳು ......."

(ಹ.ಕಾ.ಸ್ಥ.1—13)

ಎಂದು ತನ್ನ ಆರಾಧ್ಯ ದೈವವನ್ನು ಸಾಕ್ಷಿಯಾಗಿ ನುಡಿಯುವನು. 4ವೇದ, 16 ಶಾಸ್ತ್ರ, 118 ಪುರಾಣಗಳನ್ನು ಶೋಧಿಸಿದಕ್ಕೆ ತಿಳಿದು ನೋಡಿದಕ್ಕೆ ಸಾಕ್ಷಿಯಾಗಿ ಯಾರನ್ನು ಕರೆಯದೆ ಹಂಪೆಯ ವಿರುಪಾಕ್ಷನ ಪಾದವೇ ಇದಕ್ಕೆ ಸಾಕ್ಷಿಯೆಂದು ಹೇಳುವಲ್ಲಿ ರಾಘವಾಂಕನಿಗೆ ತನ್ನ ಆರಾಧ್ಯ ದೈವವಾದ ಹಂಪೆಯ ವಿರುಪಾಕ್ಷನಲ್ಲಿದ್ದ ಅಚಲ ವಿಶ್ವಾಸಕ್ಕೆ ಸಾಕ್ಷಿಯಾಗಿದೆ ಈ ನುಡಿ.

<u>ಶಿವಲೀಲೆಗಳು</u>:

ಜೈನ ಕವಿಗಳಾದ ಪಂಪ, ಪೊನ್ನ, ರನ್ನ ಮೊದಲಾದವರು ತಮ್ಮ ಆಗಮಿಕ ಕಾವ್ಯಗಳಲ್ಲಿ ತೀರ್ಥಂಕರರ ಜೀವನ ಚರಿತ್ರೆ ಹಾಗು ಅವರ ಭವಾವಳಿಗಳನ್ನು ಚಿತ್ರಿಸಿದಂತೆ ವೀರಶೈವ ಕವಿಗಳು ತಮ್ಮ ಕಾವ್ಯದಲ್ಲಿ ಶಿವನ ಪಂಚವಿಂಶತಿ ಲೀಲೆಗಳನ್ನು ಕುರಿತು ರಚಿಸಿರುವರು. ವೀರಶೈವ ಕವಿಯಾದ ರಾಘವಾಂಕನು ತನ್ನ ಹರಿಶ್ಚಂದ್ರ ಕಾವ್ಯದಲ್ಲಿ ಶಿವನ ಪಂಚವಿಂಶತಿ ಲೀಲೆಗಳನ್ನು ಹೇಳಿರುವನೆಂಬು ಈ ಕೆಳಗಿನ ಪದ್ಯದಿಂದ ವಿದಿತವಾಗುತ್ತದೆ.

"ಗಿರಿಜಾವಿವಾಹಮುಪಮನ್ಯುಚರಿತಂ ಗಜಾ
ಸುರಮದನ ದಕ್ಷಾಧ್ವರಂ ಕಾಲದಲನ ವಿಷ
ಹರಣ ಪಂಪಾಕ್ಷೇತ್ರ ಭಿಕ್ಷಾಟನಂ ಕಾಮದಹನಂ ಕಾಶೀವರ್ಣನಂ
ಪುರವಿಜಯ ಮಂದಾಸುರಧ್ವಂಸನಂ ಜಲ
ಧರದಹನ ಕಾಳಿಕಾಂಡದೊಳಗಾದ ಶಂ
ಕರ ಲೀಲೆಗಳನು ಹಲಪತಿಯಾಸಿ ಕಥನಮಂ ಪೇಳ್ವೆಯೀ ಕಾವ್ಯದೊಳಗೆ"

(ಹ.ಕಾ.ಸ್ಥ.) 1—20)

ಎಂದು ಹೇಳಿದಾನೆಂಬುದೇ ಹೊರತು ಕಾವ್ಯದಲ್ಲಿ ಎಲ್ಲಿಯೂ ಈ ರೀತಿಗಳ ಬಗ್ಗೆ ಉಲ್ಲೇಖವಿಲ್ಲ.

<u>ಶಿವಲಿಂಗ ಪೂಜಾ ವಿಧಾನ</u>:

ವೀರಶೈವ ಧರ್ಮದಲ್ಲಿ ಅರ್ಚನೆ, ಅರ್ಪಣೆ ಅನುಭಾವಕ್ಕೆ ಮಹತ್ವದ ಸ್ಥಾನವುಂಟು. ರಾಘವಾಂಕನು ಈ ತತ್ವಗಳನ್ನು ತನ್ನ ಕಾವ್ಯದಲ್ಲಿ ಅಳವಡಿಸಿದಾನೆ. ಹರಿಶ್ಚಂದ್ರನು ಜಲಕ್ರೀಡೆಯಾಡಿ ಬಂದು ದಿವ್ಯಾಂಬರವನ್ನುಟ್ಟು ಲಿಂಗಾರ್ಚನೆಯನ್ನು ಶಾಸ್ತ್ರೋಕ್ತವಾಗಿ ಮಾಡಿದನೆಂದು ಹೇಳಿದಾನೆ.

'' ತೊಳೆದ ಹೊಂಗೊಡದೊಳಗ್ಗಣಿಗಳಂ ತುಂಬಿ ತಂದಿಳುಹಿದರು ಕೆಲಬರಿಂಬಿಂ
ಮೊಳಗಿದವು ಪಂಚಮಹಾಶಬ್ದ ವಾದ್ಯಗಳು ಮಂ
ಗಳರವಂ ಬೆತ್ತಾಡಿ ಮುರಾಡಿ ದೀಪಾರತಿಗೆ
ತೊಳಗೆ ಲಿಂಗಾರ್ಚನೆಯನೊಲವಿನಿಂದೊಳೆಯಿಂ ಮಾಡಿದಂ ರಾಜೇಂದ್ರನು ''
(ಹ.ಕಾ.ಸ್ಥ.3-57)

'' ....... ನಿಂನ ನೃಪನ ಯಕ್ಷಕರ್ದಮ ಪುಷ್ಪ
ಗಾಡಿವಡೆಯಲು ಮಹಾರುದ್ರಾಭಿಷೇಚನದ
ಜೋಡಿಯಿಂ ಪಂಪಾಂಬಿಕಾ ಪತಿಯ ಪೂಜೆ ಮಾಡಿದ ಹರಿಶ್ಚಂದ್ರನೃಪನು ''

'' ಧೂಪಾರತಿಯ ಸಕಲ ವಾದ್ಯರವದೊಳು ಮಾಡಿ
ದಾಪೊತ್ತು ಸುರುಚಿರ ಸುಧಾನಿವೇದ್ಯವನಿತ್ತು
ಕಾಪಾಲಿಗೆಸೆವ ಕರ್ಪೂರ ವೀಳೆಯಂಗೊಟ್ಟು ರತ್ನದಾರತಿಯ ಕೆತ್ತಿ
ಶ್ರೀ ಪಾರ್ವತೀ ಪತಿಗೆ.......... ''
(ಹ.ಕಾ.ಸ್ಥ.8-81)

ಈ ರೀತಿಯಾಗಿ ಹರಿಶ್ಚಂದ್ರನು ವಿರುಪಾಕ್ಷನಿಗೆ ಪಚ್ಚಕರ್ಪೂರ ಕಸ್ತೂರಿ ಮೊದಲಾದ ಸುಗಂಧ ದ್ರವ್ಯಗಳಿಂದ ಮಹಾರುದ್ರಾಭಿಷೇಕ ಮಾಡಿ ಸಕಲ ವಾದ್ಯಗಳ ಶಬ್ದದೊಡನೆ ಧೂಪಾರತಿಯನ್ನು ಮಾಡಿ ಸುವಾಸನೆಯುಳ್ಳ ಹಾಲನ್ನು ನೈವೇದ್ಯಮಾಡಿ ಸುಗಂಧಯುಕ್ತ ಪಚ್ಚಕರ್ಪೂರ ವೀಳೆಯವನ್ನು ಕಾಪಾಲಿಗೆ ಕೊಟ್ಟು ಬೆಳಗುವರು. ರತ್ನದ ಆರತಿಯನ್ನು ಬೆಳಗಿದನು. ಹೀಗೆ ಹರಿಶ್ಚಂದ್ರನು ವಿರು ಪಾಕ್ಷನಿಗೆ ಅಷ್ಟವಿಧಾರ್ಚನೆಯನ್ನು ಮಾಡಿದನು.

) <u>ಪ್ರಸಾದ ತತ್ವ ಹಾಗು ಮಾಹೇಶ್ವರ ನಿಷ್ಠೆ</u>:

ವೀರಶೈವ ಧರ್ಮಕ್ಕೆ ಷಟ್‌ಸ್ಥಲ ತತ್ವವು ಆತ್ಮಸ್ವರೂಪದಂತಿದೆ. ಈ ಷಟ್‌ಸ್ಥಲದಲ್ಲಿ ಅತ್ಯಂತ ಪ್ರಧಾನ ವಾದುದು ಸಾಮಾಜಿಕ ಹಾಗೂ ವೈಯಕ್ತಿಕ ಉನ್ನತಿಗೆ ಕಾರಣೀಭೂತವಾದುದು ಪ್ರಸಾದ ತತ್ವವು. ಅದನ್ನು ರಾಘವಾಂಕನು ತನ್ನ ಕಾವ್ಯದಲ್ಲಿ ಅಳವಡಿಸಿಕೊಂಡಿದಾನೆ. ವೀರಶೈವ ಧರ್ಮದಲ್ಲಿ ಅರ್ಚನೆ ಗಿದ್ದಷ್ಟೇ ಮಹತ್ವ ಅರ್ಪಣೆಗೂ ಇದೆ. ಶಿವಪೂಜೆಯಾದನಂತರ ಶಿವನಿಗೆ ಪ್ರಸಾದವನ್ನು ನೈವೇದ್ಯ

ಮಾಡಿದ ನಂತರ ಸಹ ಪಂಕ್ತಿ ಭೋಜನವನ್ನು ಮಾಡುವರು.

"ಗಡಣವಿಡಿದೊಗ್ಗುವಿಡಿದೋರಣಂಬಿಡಿದು ತರ
ವಿಡಿದು ಸರಿಸಂ ಬಡಿಸಿ ಸಾಲ್ವಿಡಿದು ಪರಿಪಂತಿ
ವಿಡಿದು ಕವಿಗಳ ಗಮಕಿಗಳ ವಾದಿಗಳ ವಾಗ್ಮಿಗಳ ಗಮಕಾಧೀಶರ
ಮಡದಿಯರ ಮನ್ನಣೆಯ ಮಾನಿಸರು ಮುಖ್ಯರೆ ನ
ಲೆಡೆಗೊಂಡ ಸಕಲ ಪರಿಜನವೆರಸಿ ಸವಿದು ಸಂ
ಗಡ ಹಲಸಗೊಳುಂಡನಿನಕುಲಲಲಾಮ.........."

(ಹ.ಕಾ.ಸ್ಥ.3-59)

ಈ ತೆರನಾಗಿ ಕವಿಗಳು, ಗಮಕಿಗಳು, ವಾದಿಗಳು, ವಾಗ್ಮಿಗಳು, ಗಾಯಕಾಧೀಶರು ಮಡದಿಯರು, ಮನ್ನಣೆಯ ಮನುಷ್ಯರು ಮೊದಲಾದವರೊಡನೆ ರಾಜನು ಪ್ರಸಾದ ಸೇವನೆ ಮಾಡಿದನು.

ಎಲ್ಲ ಅನುಕೂಲ ಇದ್ದಾಗ ಪೂಜೆ ಮೊದಲಾದ ಧಾರ್ಮಿಕ ವಿಧಿ-ವಿಧಾನಗಳನ್ನು ಮಾಡುವುದೇನು ಹೆಚ್ಚಿನದಲ್ಲ. ಹರಿಶ್ಚಂದ್ರನು ರಾಜನಾಗಿದ್ದಾಗ ಯಾವ ರೀತಿ ಪೂಜಾದಿಗಳನ್ನು ಮಾಡುತ್ತಿದ್ದನೋ ಅದೇ ರೀತಿ ಹೊಲೆಯನ ಆಳಾದಾಗ್ಯೂ ಕೂಡ ದಿನನಿತ್ಯದ ಪೂಜೆ ಮಾಡಿ ತನ್ನ ಕಾಯಕದಿಂದ ಬಂದ ಫಲವನ್ನು ಲಿಂಗಕ್ಕೆ ಅರ್ಪಿಸಿ ಊಟ ಮಾಡುತ್ತಿದ್ದನು. ಇಲ್ಲಿ ಎಲ್ಲ ಕಡೆಗೂ ವೀರಶೈವ ನಿಷ್ಠೆಯನ್ನು ಕಾಣಬಹುದು.

ಕಾಯಕದಿಂದ ಬಂದ ಕಾರೆಯ ಸೊಪ್ಪನ್ನಾದರೂ ಲಿಂಗಕ್ಕೆ ಅರ್ಪಿಸಿ ಸೇವಿಸಬೇಕೆನ್ನುವುದು ಶರಣಧರ್ಮದ ನಿಯಮ. ಅದನ್ನು ಹರಿಶ್ಚಂದ್ರನು ಈ ರೀತಿಯಾಗಿ ಪಾಲಿಸುತ್ತಿದ್ದನು.

"ಪಡಿಯಕ್ಕಿಯಂ ತಂದು ತನ್ನ ಮಂತ್ರಿಯ ಕೈಯ
ಕೊಡಲಾತನದನೆಸೆದು ವೃಷಭಂಗೆ ಮೇಯಿಸಿ
ತೊಡನೆ ಬಳಿವಿಡಿದುದರಗೋಮಯವನೆತ್ತಿ ತಂದೇಕಾಂತದಲಿ ತೊಳೆದು
ಕಡೆಗೆ ಜೀರ್ಣಿಸದಕ್ಕಿಯಂ ತಂದು ಕೊಟ್ಟೊಡಾ
ಪೊಡವಿಪಂ ಲಿಂಗಾರ್ಪಿತಂ ಮಾಡಿ......."

(ಹ.ಕಾ.ಸ್ಥ.11-45)

ಅದನ್ನು ಸೇವಿಸುತ್ತಿದ್ದನೆಂದು ರಾಘವಾಂಕನು ಹೇಳುವನು. ಮೇಲ್ಕಾಣಿಸಿದ ಪದ್ಯದಲ್ಲಿ ಹರಿಶ್ಚಂದ್ರನು ಶವಶಿರದ ಅಕ್ಕಿಯನ್ನು ತನ್ನ ಮಂತ್ರಿಯ ಕೈಗೆ ಕೊಡುತ್ತಾನೆ. ಆತನು ಅದನ್ನು ಒಂದು ಆಕಳಿಗೆ ತಿನ್ನಿಸಿ ಅದರ ದಾರಿ ಹಿಡಿದು ಅದರ ಗೋಮಯವನ್ನು ಎತ್ತಿ ತಂದು ಏಕಾಂತದಲ್ಲಿ ತೊಳೆದು ಕಡೆಗೆ ಜೀರ್ಣಿಸದೆ ಉಳಿದಿದ್ದ ಅಕ್ಕಿಯನ್ನು ಮಂತ್ರಿಯು ಹರಿಶ್ಚಂದ್ರನಿಗೆ ತಂದುಕೊಡುತ್ತಾನೆ. ಅದನ್ನು ಲಿಂಗಾರ್ಪಿತ ಮಾಡಿ ನಂತರ ತಾನು ಸೇವಿಸುತ್ತಾನೆ.

ಇಲ್ಲಿ ಹರಿಶ್ಚಂದ್ರನ ವರ್ತನೆ ಸಂಶಯಕ್ಕೆಡೆ ಮಾಡುತ್ತದೆ. ಹರಿಶ್ಚಂದ್ರನು ಶವಶಿರದ ಅಕ್ಕಿಯನ್ನು

ನೇರವಾಗಿ ಅನ್ನ ಮಾಡಿ ಲಿಂಗಕ್ಕೆ ಅರ್ಪಿಸದೇ ಮೇಲ್ಕಾಣಿಸಿದ ಕ್ರಿಯೆಯಲ್ಲವನ್ನೂ ಮಾಡಿ ನಂತರ ಅರ್ಪಿಸಲು ಕಾರಣವೇನು? ಹೀಗೇಕೆ ಮಾಡಿದ ಎಂಬ ಪ್ರಶ್ನೆ ಓದುಗರ ಮನದಲ್ಲಿ ಮೂಡುತ್ತದೆ.

ಇದಕ್ಕೆ ಉತ್ತರವಾಗಿ ಬಹುಶಃ ಶವಶಿರದ ಅಕ್ಕಿಯು ಮೈಲಿಗೆಯಾದುದರಿಂದ ಅದನ್ನು ಪವಿತ್ರಗೊಳಿಸಲು ಗೋವಿಗೆ ತಿನ್ನಿಸಿ ನಂತರ ಪವಿತ್ರವೆಂದು ಭಾವಿಸಿದ ಗೋಮಯದಲ್ಲಿ ಅಳಿಯದೇ ಉಳಿದ ಅಕ್ಕಿಯನ್ನು ಪವಿತ್ರವಾಯಿತೆಂಬ ಭಾವನೆಯಿಂದ ತೆಗೆದುಕೊಂಡು ನೈವೇದ್ಯ ಮಾಡಿ ಹರಿಶ್ಚಂದ್ರನು ಸೇವಿಸುತ್ತಿರಬೇಕೆಂದು ಭಾವಿಸಲು ಅವಕಾಶವಿದೆ.

ಹೀಗೆ ರಾಘವಾಂಕನ ಹರಿಶ್ಚಂದ್ರ ಕಾವ್ಯವು ಈ ಮೊದಲೇ ಹೇಳಿದ ಹಾಗೆ ವೀರಶೈವ ಮತೀಯ ಅಂಶಗಳಿಂದ ಕಿಕ್ಕಿರಿಯದೇ ಸಾರ್ವಕಾಲಿಕ, ಸರ್ವದೇಶೀಯ ಅಂಶಗಳನ್ನು ಹೊಂದಿರುವ ಕಾವ್ಯವಾಗಿದೆ. ಆದ್ದರಿಂದ ಇದರಲ್ಲಿ ವೀರಶೈವ ಧರ್ಮಕ್ಕೆ ಸಂಬಂಧಪಟ್ಟ ಅಂಶಗಳು ಹೇರಳವಾಗಿ ಲಭ್ಯವಿಲ್ಲದ್ದಕ್ಕಾಗಿ ಇದೊಂದನ್ನೇ ಇಲ್ಲಿ ಅಲ್ಪ ಪ್ರಮಾಣದಲ್ಲಿ ತಿಳಿಸಲಾಗಿದೆ.

<u>ಆಕರಗಳು</u>:

1) ಶಿವರುದ್ರಪ್ಪ ಜಿ.ಎಸ್. :1987: ಪರಿಶೀಲನ: ಉಷಾಸಾಹಿತ್ಯ ಮಾಲೆ, ಮೈಸೂರು.

2) ಶಿವರುದ್ರಪ್ಪ ಜಿ.ಎಸ್. :1976: ರಾಘವಾಂಕ: ಐ.ಬಿ.ಎಚ್.ಪ್ರಕಾಶನ, ಬೆಂಗಳೂರು

3) ವೆಂಕಣ್ಣಯ್ಯ ಟಿ.ಎಸ್. ಹಾಗೂ ಕೃಷ್ಣಮೂರ್ತಿ ಎ.ಆರ್.:1963: ಹರಿಶ್ಚಂದ್ರ ಕಾವ್ಯ ಸಂಗ್ರಹ ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

4) ವೆಂಕಟರಾಮಾಚಾರ್ಯ ಕೆ. :1956: ರಾಘವಾಂಕನ ಕೃತಿ ರತ್ನ. ಕನ್ನಡ ನುಡಿ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

## ಸಮಾರೋಪ

ರಾಘವಾಂಕನು ಹರಿಹರ ಹಾಗು ವಚನಕಾರರಿಂದ ಪ್ರಭಾವಿತನಾಗಿ ಕಾವ್ಯವನ್ನು ರಚಿಸಿದರೂ ಕೂಡ ಕಾವ್ಯದ ವಸ್ತು, ಭಾಷೆ, ಉದ್ದೇಶ, ಛಂದಸ್ಸು, ರೀತಿಯಲ್ಲಿ ತನ್ನ ಸ್ವಂತಿಕೆಯನ್ನು ಮೆರೆದಿದ್ದಾನೆ. ಪುರಾಣೇತಿಹಾಸಗಳ ಕಥಾವಸ್ತುವನ್ನು ತೆಗೆದುಕೊಂಡು ಕಾವ್ಯವನ್ನು ರಚಿಸಿದ್ದರೂ ಕೂಡ ಹಿಂದಿನ ಆಕರಗಳಿಗೆ ಸಂಪೂರ್ಣ ಋಣಿಯಾಗದೆ, ರಾಘವಾಂಕನ ಸ್ವತಂತ್ರ ದೃಷ್ಟಿ, ಕತೆಯಲ್ಲಿನ ಕೆಲವು ಪ್ರಸಂಗಗಳ ನೂತನ ಸೃಷ್ಟಿ, ಪಾತ್ರನಿರ್ಮಾಣ ಕೌಶಲ ಹಾಗು ಕ್ರಾಂತಿಕಾರಕ ವಿಚಾರಗಳಿಂದ ರಾಘವಾಂಕನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಿರಸ್ಥಾಯಿಯಾಗಿದ್ದಾನೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ರಾಘವಾಂಕನ ವೈಶಿಷ್ಟ್ಯ ಹಾಗು ಆತನ ಸ್ಥಾನಮಾನವನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಪಂಡಿತರ ಸೊತ್ತಾಗಿ ರಾಜಾಶ್ರಯದಲ್ಲಿ ಮೆರೆಯುತ್ತಿದ್ದ ಕನ್ನಡ ಕಾವ್ಯ ಕನ್ನಿಕೆಯ ರಾಜಶೃಂಖಲೆಯನ್ನು ಬಿಡಿಸಿ ಜನಾಶ್ರಯಕ್ಕೆ ತಂದವರು ವಚನಕಾರರು. ಇವರ ಈ ಪರಂಪರೆಯನ್ನು ಹರಿಹರ ರಾಘವರು ಮುಂದುವರೆಸಿ ಸಾಮಾನ್ಯ ಜನತೆಗಾಗಿ 'ಶಿವಭಕ್ತ' ರಿಗಾಗಿ ಕಾವ್ಯರಚಿಸ ಹೊರಟರು. ಇದರ ಪರಿಣಾಮವಾಗಿ ಕಾವ್ಯವಸ್ತುವಿನಲ್ಲಿ ಮಾತ್ರವಲ್ಲ ಭಾಷಾಭಿವ್ಯಕ್ತಿಯಲ್ಲೂ ತೀವ್ರವಾಗಿ ಬದಲಾವಣೆಯುಂಟಾಯಿತು.

ವಚನಕಾರರಿಂದ ಪ್ರಭಾವಿತನಾದ ಹರಿಹರನು ಪಂಪನ ಆಶ್ರಯದಾತ ರಾಜನಿಗೆ ಕಥಾನಾಯಕನನ್ನು ತಗುಳ್ಚಿ ಬರೆಯುವ ನರಸ್ತುತಿ ಪರಂಪರೆಯನ್ನು ತ್ಯಜಿಸುದ್ದಾನೆ. 'ಮನುಜರ ಮೇಲೆ, ಸಾವವರ ಮೇಲೆ ಕನಿಷ್ಟರ ಮೇಲೆ ಕಾವ್ಯಗಳನ್ನು ಬರೆದು ಕೆಡಬೇಡಲೆ ಮಾನವ ನೀನಹರ್ನಿಶಂ ನೆನೆ ಪೊಗಳರ್ಚಿಸೆಮ್ಮ ಹಂಪೆಯಾಳ್ದನಂ'' ಎಂದು ಶಿವನನ್ನು ಶಿವಶರಣರನ್ನು ಕುರಿತು ಕಾವ್ಯಗಳನ್ನು ಬರೆಯುವ ಹೊಸ ಸಂಪ್ರದಾಯಕ್ಕೆ ನಾಂದಿ ಹಾಡಿದ್ದಾನೆ. ಕಾವ್ಯ ವಸ್ತುವಿನ ದೃಷ್ಟಿಯಿಂದ ರಾಘವಾಂಕನು ಹರಿಹರನ ಈ ಪದ್ಧತಿಯನ್ನು ಅನುಸರಿಸಿ ಅದನ್ನೊಂದು ಪರಂಪರೆಯನ್ನಾಗಿ ಬೆಳೆಯಲು ಕಾರಣಕರ್ತನಾಗಿದ್ದಾನೆ.

''ಎನಿತು ಸಿರಿ ಸಾರ್ದಡಂ ಮಾಣ್ಬಡಂ ನಿತ್ಯತ್ವ
ವ ನುವಪ್ಪಡಂ ಮೆಚ್ಚಿ ಹಂಪೆಯರ
ಸನ ಪೊಗಳ್ವನಾಲಗೆಯೊಳನ್ಯದೈವವ ಭವಿಗಳಂ ಕೀರ್ತಿಸಿದೊಡದೆ
ಮನಸಿಜಾರಿಯ ಭಕ್ತನಲ್ಲ ತಾನೆನಿಪ ಬಿರು
ದಿನ ಕವಿ........''

(ಹ.ಕಾ.ಸ್ಥ.1—32)

ಎಂದು ತನ್ನ ಕಾವ್ಯ ಧೋರಣೆಯನ್ನು ಉದ್ಘೋಷಿಸಿಕೊಂಡಿದ್ದಾನೆ.

ಕವಿ ಕಾವ್ಯದ ಪ್ರಾರಂಭದಲ್ಲಿ ತನ್ನ ಕಾವ್ಯದ ಬಗ್ಗೆ ಹೆಮ್ಮೆಯಿಂದ ಹೇಳಿಕೊಂಡ ಮಾತು ಅಕ್ಷರಶಃ ಸತ್ಯವಾಗಿದೆ.

"ವೇದನಾಲ್ಕರೊಳು..... (1–13)

ಇಲ್ಲಿ ಕವಿಯ ಬಹುಶ್ರುತಿತ್ವ, ಪಾಂಡಿತ್ಯ, ವಿದಗ್ಧತೆಗಳ ಜೊತೆಗೆ ಕಾವ್ಯದ ವಸ್ತುವಿನ ಆಯ್ಕೆಯಲ್ಲಿ ಆತನ ಪರಿಶೋಧನಾ ದೃಷ್ಟಿಯು ವ್ಯಕ್ತವಾಗುತ್ತದೆ. ರಾಘವಾಂಕನು ಹರಿಶ್ಚಂದ್ರ ಕತೆಯನ್ನು ಇದ್ದಕ್ಕಿದ್ದಂತೆ ಎತ್ತಿಕೊಂಡು ಕಾವ್ಯ ರಚಿಸಿಲ್ಲ. ಅದನ್ನು ವೇದ, ಶಾಸ್ತ್ರ, ಪುರಾಣಗಳಲ್ಲಿ ಕೇಳಿ, ಶೋಧಿಸಿ, ತಿಳಿದು, ವಿಚಾರಮಾಡಿ, ತೂಗಿನೋಡಿ ಹೇಳಿದ್ದಾನೆ. ಅಂತೆಯೆ ಇದರೊಳಗೊಂದು ಕುಂದಿಲ್ಲ, ಬೋಧಿಸುವೊಡೆ ಈ ಕೃತಿಗೆ ಪ್ರತಿಯಿಲ್ಲ. ರಾಘವಾಂಕನ ಕಾವ್ಯ ತರ್ಕಕ್ಕಿಕ್ಕಿದ ಮುಂಡಿಗೆ ಎಂದು ಸವಾಲು ಹಾಕುವ ಧೈರ್ಯವಿದೆ. ಕಾವ್ಯದ ಉತ್ಕೃಷ್ಟತೆಯ ಬಗ್ಗೆ ಅಭಿಮಾನವಿದೆ. ಕವಿಯ ಈ ಎದೆಗಾರಿಕೆ ಕಾವ್ಯಕ್ಷೇತ್ರದಲ್ಲಿ ಈಗಾಗಲೇ ಆತನು ಗಳಿಸಿರುವ ಉನ್ನತ ಸ್ಥಾನವನ್ನು ಸೂಚಿಸುತ್ತದೆ. ಇಲ್ಲಿ ನಾವು ಇನ್ನೊಂದು ವಿಷಯವನ್ನು ಗಮನಿಸಬಹುದು. "ವೀರೇಶ ಚರಿತ್ರೆಯಲ್ಲಿ ಕವಿ ತನ್ನ ಅಗ್ಗಳಿಕೆಯನ್ನು ಏನೇನೂ ಹೇಳಿಕೊಂಡಿಲ್ಲ. ಆಗ ಆತ ಇನ್ನೂ 'ಹರಿಹರದೇವರ ಕಾರುಣ್ಯದ ಸುತ, ಶಿವಕವಿ ಭೃತ್ಯ. ಹಂಪೆಯ ರಾಘವ ಪಂಡಿತ' ಮಾತ್ರ. (ವಿ.ಚ.1–8) ಅದೇ ಸೋಮನಾಥ ಚಾರಿತ್ರ, ಹರಿಶ್ಚಂದ್ರ ಕಾವ್ಯಗಳನ್ನು ಬರೆಯುವ ಹೊತ್ತಿಗೆ, 'ದುಷ್ಕವಿಗಳೆದೆಯ ಕೊಂತ, ಮೂಗಿನ ಕತ್ತಿಯವುಚ ಕವಿನಿಕರ ಚಾದಂತ, ಹಂಪೆಯ ರಾಘವಾಂಕ ಪಂಡಿತನುಭಯ ಕವಿ ಶರಭ ಭೇರುಂಡ' (ಹ.ಕಾ.1–29), ಉಭಯಕವಿ ಕಮಲರವಿ (ಹ.ಕಾ.1–15) ಕವಿಯ ಈ ಬಿರುದುಗಳು ಆತನ ಕಾವ್ಯದ ಬೆಳವಣಿಗೆಯ ಪ್ರತೀಕ ಮಾತ್ರವಲ್ಲದೆ ಆತನ ಸಾಮಾಜಿಕ ಸ್ಥಾನಮಾನಗಳ ಏರಿಕೆಯನ್ನು ಪ್ರತಿನಿಧಿಸುತ್ತವೆ." ಸೂರ್ಯನಾರಾಯಣ:1988:42, 43);

'ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಪೇಳ್ದ ಸಮಸ್ತಭಾರತಂ ಪೇಳ್ವೆಂ ಎಂಬ ಪಂಪನ ಮಾತಿನಂತೆ ರಾಘವಾಂಕನು ವೇದ ಪುರಾಣೇತಿಹಾಸಗಳಲ್ಲಿ ಬಂದ ಹರಿಶ್ಚಂದ್ರ ಕತೆಯನ್ನು ಬಳಸಿಕೊಂಡು ಕಾವ್ಯ ರಚಿಸಿದರೂ ಕೂಡ ಕಾವ್ಯದಲ್ಲಿ ತನ್ನ ಸ್ವಂತಿಕೆಯನ್ನು ಮೆರೆದಿದ್ದಾನೆ. ಮೂಲದಲ್ಲಿ ಇಲ್ಲದೇ ಇರತಕ್ಕ ಪಾತ್ರಗಳ ವರ್ಣನೆ, ಸನ್ನಿವೇಶ ನಿರ್ಮಾಣಗಳನ್ನು ರಾಘವಾಂಕನು ತನ್ನ ಪ್ರತಿಭೆಯಿಂದ ಉತ್ಕೃಷ್ಟವಾಗಿ ಚಿತ್ರಿಸಿದ್ದಾನೆ.

ರಾಘವಾಂಕನು ಸಾಂಪ್ರದಾಯಿಕವಾಗಿಯೇ ದೇವತಾ ಸ್ತುತಿಯ ಮಂಗಳ ಪದ್ಯದೊಂದಿಗೆ ತನ್ನ ಕೃತಿಯನ್ನು ಪ್ರಾರಂಭಿಸುತ್ತಾನೆ.

"( ಶ್ರೀಪತಿಗೆ ಸೊಬಗನು ಉಡುಪತಿಗೆ ಶಾಂತಿಯನು...". (ಹ.ಕಾ.ಸ್ಥ.1–5)

ಕವಿಯ ಮಹೋನ್ನತ ಪ್ರತಿಭೆಯನ್ನು ಹೊರಹೊಮ್ಮಿಸತಕ್ಕ ಈ ಪದ್ಯ ಹಲವಾರು ವಿಮರ್ಶಕರ ಮೆಚ್ಚುಗೆಗೆ ಪಾತ್ರವಾಗಿದೆ. ''ಈ ಪದ್ಯ ಕನ್ನಡ ಸಾಹಿತ್ಯದಲ್ಲಿಯೇ ಅಪೂರ್ವವಾದ ದೇವತಾಸ್ತುತಿ ಎಂದು ಅನ್ನಿಸುತ್ತದೆ. ಅದರ ಭಾಷೆಯ ಬೀಸು, ಭಾವನೆಯ ಮಹೋನ್ನತಿ, ವಿಶಿಷ್ಟವಾದ ರೀತಿಯಲ್ಲಿ ಮನಸ್ಸನ್ನು ಆಕ್ರಮಿಸುತ್ತದೆ.'' (ಶಿವರುದ್ರಪ್ಪ :1982:124)

ದೇವಿಭಾಗವತದಲ್ಲಿ ಹರಿಶ್ಚಂದ್ರನಿಗೆ ನೂರಾರು ಹೆಂಡಂದಿರಿದ್ದಾರೆ. ರಾಘವಾಂಕನು ಉಳಿದ ಹೆಂಡಂದಿರ ಬಗ್ಗೆ ಪ್ರಸ್ತಾಪಿಸದೆ ಅವನನ್ನು ಏಕಪತ್ನಿವ್ರತಸ್ತನೆನ್ನುವಂತೆ ಚಿತ್ರಿಸಿರುವುದು ಉಚಿತವಾಗಿದೆ. ದೇವಿಭಾಗವತದಲ್ಲಿ ಮಂತ್ರಿ ಸತ್ಯಕೀರ್ತಿಯ ಪಾತ್ರ ಬರುವುದಿಲ್ಲ. ರಾಘವಾಂಕನಲ್ಲಿ ಇದೊಂದು ಮೌನಪಾತ್ರವಾಗಿ ಕಂಡರೂ ಇವನ ಮಹತ್ವ ಎಷ್ಟು ಹೇಳಿದರೂ ಸಾಲದು. ನಿಜವಾದ ಸ್ವಾಮಿನಿಷ್ಠ ಸೇವಕನಂತೆ ಯಾರ ಕಣ್ಣಿಗೂ ಬೀಳದೆ ಸ್ವಾಮಿಯನ್ನು ಕಡೆಯವರೆಗೂ ಹಿಂಬಾಲಿಸುತ್ತಾನೆ. ಅಯೋಧ್ಯೆಯ ವರ್ಣನೆ, ಹರಿಶ್ಚಂದ್ರ, ಚಂದ್ರಮತಿ ಲೋಹಿತಾಶ್ವ, ಸತ್ಯಕೀರ್ತಿಯರ ವರ್ಣನೆ, ಬೇಟೆಯ ವರ್ಣನೆಗಳೆಲ್ಲಾ ಮೂಲದಲ್ಲಿ ಎಲ್ಲೂ ಇರದೆ ರಾಘವಾಂಕನ ಸ್ವಂತ ನಿರ್ಮಿತಿಯಾಗಿದೆ. ''ಹರಿಶ್ಚಂದ್ರ ಕಾವ್ಯ ಹಿಂದಿನ ಆಕರಗಳಿಗೆ ಸಂಪೂರ್ಣ ಋಣಿಯಾಗದೆ ರಾಘವಾಂಕನ ಸ್ವತಂತ್ರ ದೃಷ್ಟಿಯ ಗಣಿಯಾಗಿದೆ' ಎಂಬ ಜಿ.ಎಸ್.ಶಿವರುದ್ರಪ್ಪನವರ ಮಾತು ಸತ್ಯವೆನಿಸುತ್ತದೆ.

ಕವಿಯಾದವನು ತಾನು ಬದುಕಿದ ಕಾಲದ ಮೌಲ್ಯಗಳನ್ನು ತನ್ನ ಕಾವ್ಯದಲ್ಲಿ ಅಳವಡಿಸಬೇಕಾಗುವುದು. ರಾಘವಾಂಕನು ತನ್ನ ಉಳಿದ ಕಾವ್ಯಗಳಲ್ಲಿ ಮತೀಯ ವಿಷಯಗಳನ್ನು ಪ್ರತಿಪಾದಿಸಿದ್ದರೂ ಕೂಡ ಹರಿಶ್ಚಂದ್ರ ಕಾವ್ಯವು ಆ ಮತೀಯ ಚೌಕಟ್ಟನ್ನು ಮೀರಿ ನಿಂತ ಕಾವ್ಯವಾಗಿದೆ. ಹರಿಶ್ಚಂದ್ರ ಕಾವ್ಯದಲ್ಲಿ ಕವಿ ಹೊಲೆತನದ ಸಮಸ್ಯೆಯನ್ನು ಎತ್ತಿಕೊಂಡಿದ್ದರೂ ಅವನು ಸಮಸ್ಯೆಯನ್ನು ನೋಡಿರುವ ರೀತಿ ವಚನಕಾರರ ರೀತಿಗಿಂತ ಭಿನ್ನವಾಗಿದೆ. ವಚನಕಾರರು ಈ ಸಮಸ್ಯೆಯನ್ನು ಸಾಮಾಜಿಕ ದೃಷ್ಟಿಯಿಂದ ನೋಡಿದರೆ ರಾಘವಾಂಕನು ತಾತ್ವಿಕವಾಗಿ ನೋಡಿದ್ದಾನೆ. ಹುಟ್ಟಿನಿಂದ ಯಾರೂ ಹೊಲೆಯರಲ್ಲ; ಅದು ಸಂಸ್ಕಾರಜನ್ಯ ಗುಣ ಎನ್ನುವುದು ರಾಘವಾಂಕನ ಅಭಿಮತ.

ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕರುಣರಸವನ್ನು ಮನಕರಗಿ ಕಣ್ಣೀರು ಸುರಿಯುವಂತೆ ಚಿತ್ರಿಸಿರತಕ್ಕ ಕವಿಗಳೆಂದರೆ ರಾಘವಾಂಕ ಹಾಗು ಷಡಕ್ಷರರು. ರಾಘವಾಂಕನು ಹರಿಶ್ಚಂದ್ರಕಾವ್ಯದಲ್ಲಿ ತನ್ನ ಮಗನನ್ನು ಕಳೆದುಕೊಂಡು ದು:ಖಿಸತಕ್ಕ ಚಂದ್ರಮತಿಯ ಪ್ರಲಾಪವನ್ನು ಓದುತ್ತ ಹೋದಂತೆ ಕಣ್ಣೀರು ಕೋಡಿಯಾಗಿ ಹರಿಯುತ್ತದೆ. ಇಂಥದೇ ಪ್ರಸಂಗವನ್ನು ಷಡಕ್ಷರನ ರಾಜಶೇಖರ ವಿಳಾಸದಲ್ಲಿ ನೋಡಬಹುದು. ಅಲ್ಲಿ ತಿರುಕೊಳವಿನಾಚಿಯು ತನ್ನ ಮಗನು ರಾಜನ ವೈಹಾಳಿಯ ರಥದ ಗಾಲಿಗೆ ಸಿಕ್ಕಿ ಮಡಿದಾಗ ದು:ಖಿಸತಕ್ಕ, ರೋದನ ಕರುಳು ಕಿತ್ತು ಬರುವಂಥದ್ದು. ರಾಜನ ದಬ್ಬಾಳಿಕೆ ಶೋಷಣೆಗೆ ಒಳಗಾಗಿ ದು:ಖಿತಳಾದರೆ ಹರಿಶ್ಚಂದ್ರಕಾವ್ಯದಲ್ಲಿ ಚಂದ್ರಮತಿ ಹಾಗು ಹರಿಶ್ಚಂದ್ರರು

ಸತ್ಯವಾಕ್ಯ ಪರಿಪಾಲನೆಗಾಗಿ ತಮ್ಮನ್ನು ತಾವು ಶೋಷಣೆಗೆ ಒಳಗು ಮಾಡಿಕೊಳ್ಳುತ್ತಾರೆ. ಒಟ್ಟಾರೆ ಈ ಎರಡು ಕಾವ್ಯಗಳಲ್ಲಿ ಕರುಣರಸದ ಪ್ರತಿಪಾದನೆ ಮನಮಿಡಿಯುವಂತೆ ಮೂಡಿ ಬಂದಿದೆ.

"ನಾಟಕೀಯತೆ ರಾಘವಾಂಕನ ಶೈಲಿಯ ಪ್ರಮುಖ ಲಕ್ಷಣ. ಅವನೊಬ್ಬ ಮಹಾ ನಾಟಕಕಾರ. ವಸ್ತು, ಭಾಷೆ, ಛಂದಸ್ಸುಗಳಲ್ಲಿ ಹೇಗೋ ಕಾವ್ಯ ನಿರೂಪಣೆಯಲ್ಲಿಯೂ ಹಾಗೆ ಅನ್ಯರಿಗಿಂತ ಭಿನ್ನ ವರ್ಗವನ್ನು ಅನುಸರಿಸಿದ್ದಾನೆ. ಸಂಭಾಷಣೆಯಿಂದ ಕೂಡಿದ ನಿರೂಪಣಾ ರೀತಿಯೇ ಅವನ ಮಾರ್ಗ. ಕಾವ್ಯಕತೆಯನ್ನು ತಾನು ಹೇಳುವುದಕ್ಕಿಂತ ಪಾತ್ರಗಳ ಸಂಭಾಷಣೆಯ ಮೂಲಕ ಹೇಳಿಸಿಕೊಂಡು ಸಾಗುವುದೇ ಅವನಿಗೆ ಹೆಚ್ಚು ಪ್ರಿಯ. ಕನ್ನಡ ಸಾಹಿತ್ಯದಲ್ಲಿ ನಾಟ್ಯ ಪ್ರತಿಭೆಯನ್ನು ಮೆರೆದ ಕವಿಗಳು ವಿರಳ. ವಿರಳರಲ್ಲಿಯೇ ರಾಘವಾಂಕನದು ಪ್ರಮುಖ ಹೆಸರು. ರನ್ನನಲ್ಲಿಲ್ಲದ ಕೆಲವು ವೈಶಿಷ್ಟ್ಯಗಳು ರಾಘವಾಂಕನ ನಾಟ್ಯಶೈಲಿಯಲ್ಲಿವೆ. 'ರನ್ನನ ನಾಟ್ಯಮಯತೆ ಮಾರ್ಗಕಾವ್ಯದ್ದಾದರೆ ರಾಘವಾಂಕನದು ದೇಶಿ ಕಾವ್ಯದ್ದು. ರನ್ನನದು ವರ್ಣನಾಮಯ ನಾಟ್ಯಮಯತೆಯಾದರೆ ರಾಘವಾಂಕನದು ಸಂವಾದಮಯ ನಾಟ್ಯಮಯತೆ. ರನ್ನನಲ್ಲಿ ಒಂದು ಪಾತ್ರ ಆಡುವ ಮಾತು ಒಂದು ವೃತ್ತ ಅಥವಾ ಒಂದು ಕಂದದಲ್ಲಿ ಮುಕ್ತಾಯವಾದ ನಂತರ ಇನ್ನೊಂದು ಪಾತ್ರ ಮತ್ತೊಂದು ವೃತ್ತದಲ್ಲಿ ಉತ್ತರ ಕೊಡುತ್ತದೆ. ರಾಘವಾಂಕನಲ್ಲಿಯಾದರೋ ಒಂದೇ ಷಟ್ಪದಿಯ ಚೌಕಟ್ಟಿನಲ್ಲಿ ಎರಡು ಪಾತ್ರಗಳು ನಡೆಸುವ ಉತ್ತರಗಳು-ಪ್ರತ್ಯುತ್ತರಗಳ ಚಕಮಕಿ ಅತ್ಯಪೂರ್ವವಾಗಿದೆ."

(ವೀರಣ್ಣ ರಾಜೂರ:1980: ೧೦೧ )

ನಡುಗನ್ನಡ ಸಾಹಿತ್ಯದ ದೇಶಿ ಪ್ರಕಾರಗಳಲ್ಲಿ ಒಂದಾದ ಷಟ್ಪದಿಯ ಸಂಸ್ಥಾಪಕನೆನಿಸಿದ ರಾಘವಾಂಕನ ಮೇಲೆ ಆತನ ಕೃತಿಗಳ ಮೇಲೆ ಅದರಲ್ಲೂ ಹರಿಶ್ಚಂದ್ರಕಾವ್ಯದ ಮೇಲೆ ಹಲವಾರು ಪುಸ್ತಕಗಳು, ನೂರಾರು ಲೇಖನಗಳು ಪ್ರಕಟಗೊಂಡಿವೆ. ರಾಘವಾಂಕನನ್ನು ಮಹಾಕವಿ, ಋಷಿಕವಿ, ಇತ್ಯಾದಿಯಾಗಿ ಆತನ ವ್ಯಕ್ತಿತ್ವವನ್ನು ಕುರಿತು ಪುಸ್ತಕಗಳು ಪ್ರಕಟಗೊಂಡಿವೆ. ಹಾಗೆಯೇ ಹರಿಶ್ಚಂದ್ರಕಾವ್ಯದಲ್ಲಿ ವ್ಯಕ್ತವಾದ ಕರುಣರಸ, ನಾಟಕೀಯತೆ ಮೊದಲಾದವುಗಳನ್ನು ಕುರಿತು, ಡ ಎಚ್.ತಿಪ್ಪೇರುದ್ರಸ್ವಾಮಿ, ಜಿ.ಎಸ್.ಶಿವರುದ್ರಪ್ಪ, ಎಲ್.ಸೂರ್ಯನಾರಾಯಣ, ಕೆ.ವೆಂಕಟರಾಮಪ್ಪ ಮೊದಲಾದವರು ಪುಸ್ತಕಗಳನ್ನು ಬರೆದಿದ್ದಾರೆ. ಆದರೆ ಅವರ್ಯಾರೂ ಹರಿಶ್ಚಂದ್ರಕಾವ್ಯದಲ್ಲಿ ಒಡಮೂಡಿ ನಿಂತ ಜನಜೀವನವನ್ನು ಅಲ್ಲಿಯ ಸಾಂಸ್ಕೃತಿಕ ಅಂಶಗಳನ್ನು ಇಡಿಯಾಗಿ ಗುರುತಿಸುವ ಕೆಲಸ ಮಾಡಿಲ್ಲ. ಅದು ಅಲ್ಲದೆ ಹರಿಶ್ಚಂದ್ರ ಕಾವ್ಯವು ಅಂಥ ಸಾಂಸ್ಕೃತಿಕ ಅಂಶಗಳ ಗಣಿಯಾಗಿರುವುದರಿಂದ ಆ ದಿಶೆಯಲ್ಲಿ ಒಂದು ಸಣ್ಣ ಪ್ರಯತ್ನವನ್ನು ನಾನು ಮಾಡಿದ್ದೇನೆ.

ಹೀಗೆ ಸಾಂಸ್ಕೃತಿಕ ಅಂಶಗಳನ್ನು ಗುರುತಿಸತಕ್ಕ ಸಮಯದಲ್ಲಿ ಎರಡು ಸಂದೇಹಗಳು ಕಂಡು ಬಂದಿವೆ.

1) ರಾಘವಾಂಕನು ವೇಶ್ಯೆಯರ ವೇಷ-ಭೂಷಣವನ್ನು ಹೇಳತಕ್ಕ ಸಮಯದಲ್ಲಿ ವೇಶ್ಯೆಯರು ಧವಳಾಂಬರವನ್ನು ಉಡುತ್ತಿದ್ದರೆಂದು ತಿಳಿಸುವನು. ಇದನ್ನು ವೇಶ್ಯಾವಾಟಿಕೆಯ ಅಧ್ಯಾಯದಲ್ಲಿ ವಿವರಿಸಿದ್ದೇನೆ. ಇಲ್ಲಿ ವೇಶ್ಯೆಯರು ಧವಳಾಂಬರವನ್ನು ಉಡುವ ವೈಶಿಷ್ಟ್ಯವೇನು ಎಂಬುದು ಮೊದಲನೆ ಸಂದೇಹ.

2) ಹರಿಶ್ಚಂದ್ರನು ವೀರಬಾಹುಕನ ಆಳಾಗಿ ಶ್ಮಶಾನವನ್ನು ಕಾಯುತ್ತಿರುವಾಗ ಬಂದಂಥ ಶವತಿರದ ಅಕ್ಕಿಯನ್ನು ಮಂತ್ರಿಯಾದ ಸತ್ಯಕೀರ್ತಿಗೆ ಕೊಡುತ್ತಾನೆ. ಆತನು ಅವುಗಳನ್ನು ಗೋವಿಗೆ ತಿನ್ನಿಸಿದ ನಂತರ ಅದನ್ನು ಹಿಂಬಾಲಿಸಿ ಹೋಗಿ ಅದು ಹಾಕಿದ ಸೆಗಣಿಯನ್ನು ತಂದು ನೀರಿನಲ್ಲಿ ತೊಳೆದು ಉಳಿದ ಅಕ್ಕಿಯಿಂದ ಅನ್ನವನ್ನು ಮಾಡಿ ಶಿವನಿಗೆ ಅರ್ಪಿಸಿ ನಂತರ ಊಟ ಮಾಡುತ್ತಾನೆ. ಹರಿಶ್ಚಂದ್ರನು ಹೀಗೆ ಮಾಡಲು ಕಾರಣವೇನು? ಇದು ಎರಡನೆಯ ಸಂದೇಹ.

ಒಟ್ಟಾರೆ ರಾಘವಾಂಕನ ಹರಿಶ್ಚಂದ್ರಕಾವ್ಯವು ಕನ್ನಡ ಸಾಹಿತ್ಯದಲ್ಲಿ "ಹರಿಶ್ಚಂದ್ರನನ್ನು ಕುರಿತು ಸಮಗ್ರವಾಗಿ ಮೂಡಿ ಬಂದ ಮೊದಲನೆಯ ಕೃತಿ ಎಂಬ ಅಗ್ಗಳಿಕೆಯನ್ನು ಪಡೆದಿದೆ. ಛಂದಸ್ಸು, ಕಾವ್ಯದ ವಸ್ತು, ರೀತಿ, ರಸ, ನಿರೂಪಣೆ, ನಾಟಕೀಯತೆ, ನೂತನ ಪಾತ್ರಸೃಷ್ಟಿ ಮೊದಾಲದವುಗಳ ಮೂಲಕ ಕನ್ನಡ ಸಾಹಿತ್ಯದಲ್ಲಿಯೇ ಅಪೂರ್ವವಾದ ಕಾವ್ಯವಾಗಿದೆ. 'ರಾಘವಾಂಕನು ಕನ್ನಡದ ಮಹಾಕವಿಗಳಲ್ಲಿ ಒಬ್ಬನು.......... ಕನ್ನಡ ಸಾಹಿತ್ಯ ಇರುವವರೆಗೆ ಆತನ ಹೆಸರು ಶಾಶ್ವತವಾಗಿ ನಿಲ್ಲುತ್ತದೆ. (ಹಿರೇಮಠ.:1966:292) ಆತನ ಕಾವ್ಯಗಳು ಎಲ್ಲಾ ಸಾಮಾಜಿಕ ಸಂದರ್ಭಗಳಲ್ಲಿ ಅರ್ಥಪೂರ್ಣವಾಗುತ್ತವೆ, ಅಗತ್ಯವಾಗುತ್ತವೆ. ಶಿವ-ಅಶಿವಗಳ ನಿರಂತರ ಹೋರಾಟದಲ್ಲಿ ಎಲ್ಲಿಯವರೆಗೂ ಮಾನವನ ಮನಸ್ಸು ಶಿವಪರವಾಗಿ ಊರ್ಧ್ವಗಾಮಿಯಾಗಿರುತ್ತದೆಯೋ ಅಲ್ಲಿಯವರೆಗೂ ರಾಘವಾಂಕನ ಕಾವ್ಯಗಳು ಜನಜೀವನವನ್ನು ಮುಟ್ಟುತ್ತವೆ. ಆತ ಜನತಾ ಕವಿಯಾಗಿ ಉಳಿಯುತ್ತಾನೆ''
(ಶಿವ್ವೀರುದ್ರಸ್ವಾಮಿ :1967:134)

ಹಲವಾರು ಮೌಲ್ಯಗಳನ್ನು ಧಾರ್ಮಿಕ ಸಿದ್ಧಾಂತಗಳನ್ನು ಒಟ್ಟಿಗೆ ಸಾರುವ ಹತ್ತಾರು ಕೃತಿಗಳು ನಮ್ಮಲ್ಲಿವೆ. ಆದರೆ 'ಸತ್ಯ' ವನ್ನೇ ಕುರಿತಾಗಿ ಇಡಿಯಾಗಿ ಹುಟ್ಟಿ ಬಂದ ಹರಿಶ್ಚಂದ್ರಕಾವ್ಯ ನಿಜಕ್ಕೂ ಕನ್ನಡದ ಒಂದು ಅಪರೂಪದ ಕಾವ್ಯವೆನಿಸಬಹುದು.

# ಗ್ರಂಥಸೂಚಿ

ಕೃತಿಗಳು:


1) ಅನಂತರಂಗಾಚಾರ್ ಎನ್. :1984: ಭಾರತೀಯ ತೀರ್ಥಕಲಾಕ್ಷೇತ್ರ ಸಂದರ್ಶನೀ — ಸ್ವಚ್ಛಂದ ಪ್ರಕಾಶನ ಮೈಸೂರು.

2) ಕುವೆಂಪು :1955: ಕಾವ್ಯವಿಹಾರ — ಉದಯರವಿ ಮೈಸೂರು.

3) ಕೆ.ವಿ.ಸುಬ್ಬಣ್ಣ, ಹಾ.ಮಾ.ನಾಯಕ :1954: ಸಂ: ಬಾಗಿನ (ಅಭಿನಂದನಗ್ರಂಥ) — ಮಹಾರಾಜ ಕಾಲೇಜ್ ಮೈಸೂರು.

4) ಖಂಡೋಬಾ ಪಿ.ಕೆ. :1991: ಕರ್ನಾಟಕದ ಲಂಬಾಣಿಗಳು: ಒಂದು ಸಾಂಸ್ಕೃತಿಕ ಅಧ್ಯಯನ — ತೇಜಸಿಂಗ ರಾಠೋಡ ಮೆಮೋರಿಯಲ್ ಟ್ರಸ್ಟ್ ಗುಲಬರ್ಗಾ

5) ಚಿದಾನಂದಮೂರ್ತಿ.ಎಂ. :1985: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ(ಮಹಾಪ್ರಬಂಧ) — ಮೈಸೂರು ವಿಶ್ವವಿದ್ಯಾಲಯ, ಮೈಸೂರು

6) ಚಿದಾನಂದಮೂರ್ತಿ ಎಂ. :1985: ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ — ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

7) ಜವರೇಗೌಡ.ದೇ. :1978: ಗದುಗಿನ ಭಾರತ: ಒಂದು ಸಾಂಸ್ಕೃತಿಕ ಅಧ್ಯಯನ — ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

8) ಜೋಶಿ ಶಂ.ಬಾ. :1967: ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ. — ಸಮಾಜ ಪುಸ್ತಕಾಲಯ ಧಾರವಾಡ.

9) ತಿಪ್ಪೇರುದ್ರಸ್ವಾಮಿ ಎಚ್. :1985: ಕರ್ನಾಟಕ ಸಂಸ್ಕೃತಿಸಮೀಕ್ಷೆ — ಡಿ.ವಿ.ಕೆ.ಮೂರ್ತಿ, ಮೈಸೂರು

10) ತಿಪ್ಪೇರುದ್ರಸ್ವಾಮಿ ಎಚ್. :1986: ಋಷಿಕವಿ ರಾಘವಾಂಕ — ಡಿ.ವಿ.ಕೆ.ಮೂರ್ತಿ ಮೈಸೂರು.

11) ನಂಜುಂಡಾರಾಧ್ಯ :1976: ಹರಿಹರಕವಿಯ ಗಿರಿಜಾಕಲ್ಯಾಣ ಮಹಾಪ್ರಬಂಧಂ ( (ಗದ್ಯಾನುವಾದ) — ಕನ್ನಡ ಸಾಹಿತ್ಯಪರಿಷತ್ತು, ಬೆಂಗಳೂರು.

12) ನಾರಾಯಣ ಪಿ.ವಿ. :1983: ವಚನಸಾಹಿತ್ಯ: ಒಂದು ಸಾಂಸ್ಕೃತಿಕ ಅಧ್ಯಯನ — ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ

13) ನಾರಾಯಣ ಪಿ.ವಿ. :1982: ವಚನವ್ಯಾಸಂಗ — ಭಾಗ್ಯಲಕ್ಷ್ಮಿಪ್ರಕಾಶನ ಬೆಂಗಳೂರು.

14) ನಾಗೇಗೌಡ ಎಚ್.ಎಲ್. 1966: ಪ್ರವಾಸಿ ಕಂಡ ಇಂಡಿಯಾ ಸಂಪುಟ-2 — ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ,

15) ನಾಯಕ ಹಾ.ಮಾ. :1977: ಕನ್ನಡ ಸಾಹಿತ್ಯ ಚರಿತ್ರೆ — ಕನ್ನಡ ಅಧ್ಯಯನಸಂಸ್ಥೆ ಮೈಸೂರು ವಿಶ್ವವಿದ್ಯಾಲಯ.

| | | | |
|---|---|---|---|
| 16) ನಾಯಕ ಹಾ.ಮಾ. | :1975: | ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ. |
| 17) ಬಸವರಾಧ್ಯ ಎನ್. ಮತ್ತು ಬಸಪ್ಪ ಎನ್. | :1969: | ಹರಿಶ್ಚಂದ್ರ ಕಾವ್ಯ ಸಂಗ್ರಹ | ಶಾರದಾ ಮಂದಿರ ಮೈಸೂರು. |
| 18) ಬ್ಯಾಕೋಡ ಜಿ.ಆರ್. | 1973 : | ಅಕ್ಷಯ ನಿಧಿ | ಅರವಿಂದ ಪ್ರಕಾಶನ ವಿಜಾಪುರ |
| 19) ಮರಿಯಪ್ಪಭಟ್ಟ | :1967: | ಕನ್ನಡ ಸಂಸ್ಕೃತಿ | ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ ಬೆಂಗಳೂರು. |
| 20) ಮರುಳಸಿದ್ಧಪ್ಪ ಕೆ. | :1975: | ಷಟ್ಪದಿ ಸಾಹಿತ್ಯ | ಬೆಂಗಳೂರು ವಿಶ್ವವಿದ್ಯಾಲಯ |
| 21) ಮಲ್ಲಿಕಾರ್ಜುನ ಶಿ.ಲಠ್ಠೆ | :1981: | ಸಂ. ಉತ್ತರ ಕರ್ನಾಟಕದ ಜನಪದ ನಂಬಿಕೆಗಳು | ಪ್ರಶಾಂತ ಪ್ರಕಾಶನ ಮುತನಾಳ |
| 22) ಮುಗಳಿ ರಂ.ಶ್ರೀ. | :1976: | ಕರ್ನಾಟಕದ ಸಾಂಸ್ಕೃತಿಕ ಪರಂಪರೆ | ಸಮಾಜ ಪುಸ್ತಕಾಲಯ ಧಾರವಾಡ |
| 23) ಮುಗಳಿ ರಂ.ಶ್ರೀ. | :1976: | ಕನ್ನಡ ಸಾಹಿತ್ಯದ ಇತಿಹಾಸ (ತೃತೀಯ ಆವೃತ್ತಿ) | ಕಾವ್ಯಾಲಯ ಮೈಸೂರು. |
| 24) ಮುಗಳಿ ರಂ.ಶ್ರೀ. | :1971: | ಕನ್ನಡ ಸಾಹಿತ್ಯ ಚರಿತ್ರ (ಕಿರಿಯ ಆವೃತ್ತಿ) | ಉಷಾಸಾಹಿತ್ಯಮಾಲೆ ಮೈಸೂರು. |
| 25) ಮಲ್ಲೇದೇವರು ಎಚ್.ಪಿ. | :19 : | ಅರ್ಚನ (ಅಭಿನಂದನ ಗ್ರಂಥ) | ಜಗದ್ಗುರು ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರ ಪಟ್ಟಾಧಿಕಾರ ಸುವರ್ಣಮಹೋತ್ಸವ ಸಮಿತಿ, ಮೈಸೂರು. |
| 26) ರಾಜರಾವ್ ಎಲ್. | :1969: | ಭಾರತೀಯ ಸಂಗೀತ ವಾದ್ಯಗಳು | ಬೆಂಗಳೂರು ವಿಶ್ವವಿದ್ಯಾಲಯ |
| 27) ರಾಮಮನೋಹರ ಲೋಹಿಯಾ (ಅನುವಾದ) | :1986: | ಜಾತಿಪದ್ಧತಿ | ಪತ್ರಿಕೆ ಪ್ರಕಾಶನ ಬೆಂಗಳೂರು. |
| 28) ರಾಮಚಂದ್ರ ಎಂ. | :1987: | ರಸಾಯನ ಕೆಲವು ಸಾಹಿತ್ಯ ಪ್ರಬಂಧಗಳು) | ಗೀತಾ ಬುಕ್‌ಹೌಸ್ ಮೈಸೂರು. |
| 29) ವಿಜಯಶ್ರೀ ಸಬರದ | :1989: | ಸಾಹಿತ್ಯ ಮತ್ತು ಮಹಿಳೆ | ನವಕರ್ನಾಟಕ ಪ್ರಕಾಶನ ಬೆಂಗಳೂರು. |
| 30) ವೆಂಕಣ್ಣಯ್ಯ ಟಿ.ಎಸ್. | :1963: | ಸಂ: ಹರಿಶ್ಚಂದ್ರ ಕಾವ್ಯ ಸಂಗ್ರಹ | ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ |
| 31) ವೆಂಕಟರಾಮಪ್ಪ | :1975: | ಕವಿರಾಘವಾಂಕ | ಡಿ.ವಿ.ಕೆ.ಮೂರ್ತಿ ಮೈಸೂರು. |

| | | | |
|---|---|---|---|
| 32) ಶಾಂತಿನಾಥ ದಿಬ್ಬದ | :1982: | ಪಂಪಭಾರತ: ಒಂದು ಸಾಂಸ್ಕೃತಿಕ ಅಧ್ಯಯನ. | ಅಪ್ರಕಟಿತ ಮಹಾಪ್ರಬಂಧ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| 33) ಶಿವರುದ್ರಪ್ಪ ಜಿ.ಎಸ್. | :1967: | ಪರಿಶೀಲನ | ಉಷಾಸಾಹಿತ್ಯಮಾಲೆ ಮೈಸೂರು |
| 34) ಶಿವರುದ್ರಪ್ಪ ಜಿ.ಎಸ್. | :1982: | ಅನುರಣನ | ವಾಗ್ದೇವಿ ಪುಸ್ತಕಗಳು ಮೈಸೂರು |
| 35) ಶಿವರುದ್ರಪ್ಪ ಜಿ.ಎಸ್. | :1976: | ಸಂ: ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ. ಸಂಪುಟ–3 | ಬೆಂಗಳೂರು ವಿಶ್ವವಿದ್ಯಾಲಯ |
| 36) ಶಿವರುದ್ರಪ್ಪ ಜಿ.ಎಸ್. | :1974: | ಗತಿಬಿಂಬ | ಸುರುಚಿ ಪ್ರಕಾಶನ ಮೈಸೂರು |
| 37) ಶಿವಕುಮಾರ ಶೈ.ವೈ. | :1979: | ರಾಘವಾಂಕನ ಹರಿಶ್ಚಂದ್ರ ಕಾವ್ಯ (ಗದ್ಯಾನುವಾದ) | ಪ್ರೀತಿ ಪ್ರಕಾಶನ ಮೈಸೂರು |
| 38) ಸದಾನಂದ ಕನವಳ್ಳಿ ಮತ್ತು ಚನ್ನಪ್ಪ ಕೆರಿಮನಿ | :1976: | ಸಂ: ವೀರಶೈವ ಸಾಹಿತ್ಯ ಸಮೀಕ್ಷೆ | ಮಹಾಕವಿ ಪಂಪ ಪ್ರಕಾಶನ, ಲಕ್ಷ್ಮೇಶ್ವರ |
| 39) ಸೀತಾರಾಮಯ್ಯ ವಿ. | :1976: | ರಾಘವಾಂಕ | ಐ.ಬಿ.ಎಚ್.ಪ್ರಕಾಶನ ಬೆಂಗಳೂರು |
| 40) ಸೀತಾರಾಮಯ್ಯ.ವಿ. | :1978: | ಸತ್ಯ ಮತ್ತು ಮೌಲ್ಯ | ಬೆಂಗಳೂರು ವಿಶ್ವವಿದ್ಯಾಲಯ |
| 41) ಸೀತಾರಾಮಯ್ಯ ವಿ. | :1970: | ಚಿನ್ನದ ಬೆಳಸು(ಸಂಪುಟ) | ಕನ್ನಡ ಸಾಹಿತ್ಯಪರಿಷತ್ತು, ಸುವರ್ಣ ಮಹೋತ್ಸವದ ಸವಿನೆನಪಿನ ಸಂಪುಟ |
| 42) ಸೂರ್ಯನಾರಾಯಣ ಎಲ್.ವಿ. | :1988: | ರಾಘವಾಂಕ ಒಂದು ಅಧ್ಯಯನ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| 43) ಹರದಗಟ್ಟಿ ಎಂ.ಎಂ. | :1985: | ಕವಿರಾಘವಾಂಕ ಹಾಗುಅವನ ಕೃತಿಗಳು(ಸಮಗ್ರಅಧ್ಯಯನ) | ಅಪ್ರಕಟಿತ ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| 44) ಹಿರೇಮಠ ಆರ್.ಸಿ. | :1966: | ಮಹಾಕವಿ ರಾಘವಾಂಕ | ಶಾರದಾಮಂದಿರ ಮೈಸೂರು. |
| 45) ಹೆಗಡೆ ಎಲ್.ಆರ್. | :1967: | ಕಾವ್ಯ ವ್ಯಾಸಂಗ | ಸಮಾಜಪುಸ್ತಕಾಲಯ ಧಾರವಾಡ. |
| 46) ಕನ್ನಡದಲ್ಲಿ ಷಟ್ಪದಿ ಸಾಹಿತ್ಯ | :1975: | ಏಳು ಉಪನ್ಯಾಸಗಳು ವಿಶೇಷ ವಾಗ್ಮಯ ಪ್ರಸಾರ | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. |
| 47) ರಾಘವಾಂಕ ವಿಚಾರಸಂಕಿರಣ | :1980: | ಪುಸ್ತಕಮಾಲೆ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |

<u>ಪತ್ರಿಕೆಗಳು</u>:

| | | | | |
|---|---|---|---|---|
| 1) ಸಂಕ್ರಮಣ | :ಸಂ–27 ಸಂಚಿಕೆ–2 | :1992: | ಸಂ: ನೀಲಾಪಾಟೀಲ | ಸಂಕ್ರಮಣ ಪ್ರಕಾಶನ ಧಾರವಾಡ |
| 2) ಜಯಕರ್ನಾಟಕ | :ಸಂ–36 ಸಂಚಿಕೆ–1 | :1958: | ಸಂ: ಬಸವನಾಳ ವಿ.ಎನ್. | -- |
| 3) ಶರಣಸಾಹಿತ್ಯ | :ಸಂ–28 ಸಂ.11–12, | | ಸಂ: ಶಿವಮೂರ್ತಿ ಬಿ. | ಶರಣಸಾಹಿತ್ಯ ಕಾರ್ಯಾಲಯ, ಬೆಂಗಳೂರು. |
| 4) ಶರಣಸಾಹಿತ್ಯ | : ಸಂ–10 ಸಂ–5 | | ಸಂ: ಶಿವಮೂರ್ತಿ ಬಿ. | — ಅದೆ — |
| 5) ಕನ್ನಡನುಡಿ | :ಸಂ–20 ಸಂ–3 | :1957: | ಸಂ: ಶಿವಮೂರ್ತಿಶಾಸ್ತ್ರಿ ಬಿ. | ಕನ್ನಡಸಾಹಿತ್ಯ ಪರಿಷತ್ತು, ಬೆಂಗಳೂರು. |
| 6) ಕನ್ನಡ ನುಡಿ | :ಸಂ–19 ಸಂ–6 | :1956: | ಸಂ: ಸೀತಾರಾಮಯ್ಯ ವಿ. | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |
| 7) ಬಸವಪಥ | :ಸಂ–5 ಸಂ–1 | :1983: | ಸಂ: ಸಿದ್ಧಯ್ಯ ಪುರಾಣಿಕ | ಬಸವ ಸಮಿತಿ ಬಸವಭವನ ಬೆಂಗಳೂರು. |

<u>ನಿಘಂಟು</u>:

| | | | |
|---|---|---|---|
| 1) ವೆಂಕಟಸುಬ್ಬಯ್ಯ ಜಿ. | :1975: | ಸಂ: ಸಂಕ್ಷಿಪ್ತ ಕನ್ನಡ ನಿಘಂಟು ಕನ್ನಡ–ಕನ್ನಡ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. |

